# ಸಿದ್ಧಗಂಗಾ

ಸಂಪುಟ-32 ಸಂಚಿಕೆ-9, 10 ಸೆಪ್ಟಂಬರ್-ಅಕ್ಟೋಬರ್-1996



ತ್ರಿವಿಧ ದಾಸೋಹ ಮೂರ್ತಿಗಳಾದ ಪರಮಪೂಜ್ಯ

**ಡಾ. ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ**

## ವಜ್ರಮಹೋತ್ಸವ ಪ್ರತಿಷ್ಠಾನ

ಶ್ರೀ ಸಿದ್ಧಗಂಗಾ ಮಠ, ತುಮಕೂರು-572 104.

* ಶ್ರೀ ಸಿದ್ಧಗಂಗೆ ಸಿದ್ಧಿಯ ತಾಣ. ನಾಡಿನಲ್ಲಿ ವಿದ್ಯೆ ದಾಸೋಹಕ್ಕೆ ಹೆಸರಾಗಿದೆ.
* ಇಲ್ಲಿಯ ಸೇವಾಕಾರ್ಯಗಳು ಸಾಗರವನ್ನು ಹೋಲುತ್ತವೆ.
* ವಿಶಿಷ್ಟಸೇವಾಕೇಂದ್ರವಾಗಿ ಬೆಳಗುತ್ತಿದೆ.
* ಶ್ರೀ ಶ್ರೀಗಳ ತ್ಯಾಗ ಮತ್ತು ನಿರಂತರ ಕ್ರಿಯಾಶೀಲತೆಯೇ ಪ್ರಗತಿಪಥದ ಬೆಳವಣಿಗೆಗೆ ಆಧಾರ.
* ಸೇವೆಯೇ ಅವರ ಬದುಕಿನ ದಿನಚರಿ. 89 ರ ಹರೆಯದಲ್ಲೂ ದಣಿವರಿಯದ ಬದುಕು ಅವರದಾಗಿದೆ.
* ಶ್ರೀ ಶ್ರೀಗಳವರ ಮಹಾ ಸಾಧನೆ ಮೇರು ಸದೃಶವಾಗಿದೆ.
* ಈ ಸಾಧನೆಯ ಪ್ರತೀಕವಾಗಿ ವಿಶ್ವ ಸ್ಮರಣೀಯ ಸ್ಮಾರಕಗಳು ನಿರ್ಮಾಣವಾಗಿವೆ. ಇವುಗಳ ವೆಚ್ಚ 6 ಕೋಟಿ ರೂಗಳು
* ಇವು ಶ್ರೀ ಶ್ರೀಗಳ ಮಹಾನ್‌ವ್ಯಕ್ತಿತ್ವ, ಸೇವಾತತ್ಪರತೆ ವಿದ್ಯಾಪ್ರಸಾರ ಮತ್ತು ಮಾನವೀಯ ಮೌಲ್ಯಗಳನ್ನು ಮುಂದಿನ ಜನಾಂಗಕ್ಕೆ ಶತಶತಮಾನಗಳ ಕಾಲ ಸಾರುತ್ತಾ ಸ್ಫೂರ್ತಿಯ ಬೆಳವಣಿಗೆಗೆ ನೆಲೆಯಾಗುತ್ತವೆ.
* 1997 ಫೆಬ್ರವರಿಯಲ್ಲಿ ವಜ್ರಮಹೋತ್ಸವ ಆಚರಿಸಿ ಬೃಹತ್‌ಸ್ಮಾರಕ ಭವನಗಳನ್ನು ಶ್ರೀಮಠಕ್ಕೆ ನಾಡಿನ ಭಕ್ತಕೋಟಿ ಕೃತಜ್ಞತಾ ಪೂರ್ವಕವಾಗಿ ಅರ್ಪಿಸುತ್ತಾರೆ.
* ಸರ್ವರ ಏಳಿಗೆಗೆ ಸಮಾನತೆಯ ಪ್ರತೀಕವಾಗಿರುವ ಶ್ರೀ ಶ್ರೀಗಳವರ ವಜ್ರ ಮಹೋತ್ಸವ ನಿಧಿಗೆ ನಾಡಿನ ಭಕ್ತಾದಿಗಳು ಶ್ರೀಮಠದಹಳೆಯ ವಿದ್ಯಾರ್ಥಿಗಳು ಮತ್ತು ಹಿತೈಷಿಗಳು ಉದಾರವಾಗಿ ಕಾಣಿಕೆ ನೀಡುವುದರೊಂದಿಗೆ ಯೋಜನೆಗಳು ಯಶಸ್ವಿಯಾಗಿ ಪೂರ್ಣವಾಗಲು ಕೋರುತ್ತೇವೆ.
* ಶ್ರೀ ಮಠದಲ್ಲಿ ಟಿ. ಸಿ. ಹೆಚ್. ತರಬೇತಿ ಪಡೆದ ಶಿಕ್ಷಕರು ಒಂದು ತಿಂಗಳ ವೇತನವನ್ನು 5-6 ಕಂತುಗಳಲ್ಲಿ ಅಧೀಕ್ಷಕರ ವಿಳಾಸಕ್ಕೆ ಕಳುಹಿಸಿಕೊಡಿ.

ಡಾ. ಎಂ. ಸಿ. ಮೋದಿ,
ಅಧ್ಯಕ್ಷರು.

ಬಿ.ಎಸ್. ಮುದ್ದಪ್ಪ, ಐ.ಎ.ಎಸ್.(ನಿ) ಕಾರ್ಯಾಧ್ಯಕ್ಷರು.

ಎಸ್.ಎಸ್. ಹಸಬಿ, ಐ.ಪಿ.ಎಸ್(ನಿ.) ಕಾರ್ಯದರ್ಶಿಗಳು.

# ಸಿದ್ಧಗಂಗಾ

ಸಂಪುಟ 32 ಸಂಚಿಕೆ 9-10 ಸೆಪ್ಟಂಬರ್-ಅಕ್ಟೋಬರ್ 96

## ಶ್ರೀ ಸಿದ್ಧಗಂಗಾಗುರುಕರುಣ ತ್ರಿವಿಧಿ

ದಿವ್ಯ ಬಂಧುವೆ ಗುರುವೆ ಭವ್ಯ ಮಾನವ್ಯನೆ
ಸೌಮ್ಯ ಶಿವರೂಪವೆ ಶ್ರೀಗುರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಎಲ್ಲೆಲ್ಲಿ ನೋಡಿದರು "ನಾನು ನಾನಿನ ಸಂತೆ"
"ಎತ್ತತ್ತ ನೋಡಿದರು" ಇದೆ ಚಿಂತೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

"ನನ್ನ ನಾನೇ ನನಗೆ ಸಾವು ತಾನಾದರೆ
ಇನ್ನಾರಿಗೆ ದೂರುವೆ ನನ್ನ ಗುರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥



ಹೆಚ್. ವಿ. ವೀರಭದ್ರಯ್ಯ

| ಲೇಖನ | ಲೇಖಕರು | ಪುಟ |
|---|---|---|



## ಶ್ರೀ ವಾಣಿ

ಶಿಕ್ಷಕ ಗುರು, ತಂದೆ, ಸ್ನೇಹಿತ, ಮಾರ್ಗದರ್ಶಿ, ಮನುಷ್ಯ ನಿರ್ಮಾಣ ಶಿಲ್ಪಿ. ಸರಳ ಜೀವನ, ಉನ್ನತ ಚಿಂತನಕ್ಕೆ ಬೇರೊಂದು ಹೆಸರು. ಅಧ್ಯಯನ, ಅಧ್ಯಾಪನ, ಜೀವನದ ಧ್ಯೇಯ, ಹಾಗೂ ಧೋರಣೆಗಳು. ಮಾತೃಕರುಳು; ಪಿತೃಮೆದುಳು ತನ್ನ ಸ್ವಭಾವ. ಮಾನವ ಸಮಾಜವನ್ನು ಸದಾ ಉನ್ನತಿಯ ಕಡೆಗೆ, ಉತ್ತಮಿಕೆಯತ್ತ ಕರೆದೊಯ್ಯುವ ನೇತಾರ. ಪ್ರಜೆಯನ್ನು ಪ್ರಭುವನ್ನು ಕತ್ತಲಿನಿಂದ ಬೆಳಕಿನೆಡೆಗೆ ಕೈಹಿಡಿದು ನಡೆಸುವ ಕರುಣಾಳು. ಒಂದು ಕಾಲದಲ್ಲಿ ಗ್ರಾಮೀಣ ಪರಿಸರದಲ್ಲಿ ದೈವಸ್ವರೂಪಿಯಾಗಿ ಗೌರವಿಸುತ್ತಿದ್ದ ಮನುಶ್ರೇಷ್ಠ. ಆತ್ಮ ಶ್ರೀಮಂತಿಕೆಯ ಧೀಮಂತವ್ಯಕ್ತಿ. ನಡೆ-ನುಡಿಯನ್ನು ಒಂದಾಗಿಟ್ಟುಕೊಂಡ ಆದರ್ಶ ಜೀವಿ. ಸಮಾಜದ ಗೌರವಕ್ಕೆ ಪಾತ್ರನಾಗಿದ್ದು ಅನ್ಯಾಯ, ಅನೈತಿಕತೆಗಳನ್ನು ತಿದ್ದುವ ಧೈರ್ಯಉಳ್ಳಾತ. ರಾಜಕಾರಣಿಗಳಿಂದು ಶಿಕ್ಷಕನನ್ನು ಶೋಷಣೆಗೆ ಒಳಗು ಮಾಡುತ್ತಿದ್ದಾರೆ. ಆತನ ನೆಮ್ಮದಿಗೆ ಭಂಗತರುತ್ತಿದ್ದಾರೆ. ಪ್ರಾಮಾಣಿಕ ಶಿಕ್ಷಕನ ಆತ್ಮಸ್ಥೈರ್ಯವೇ ಕುಸಿದು ಹೋಗುವಂತೆ ನಡೆಸಿಕೊಳುತ್ತಿದಾರೆ. ಭ್ರಷ್ಟಾಚಾರಕ್ಕೆ ದೂಡುತ್ತಿದ್ದಾರೆ. ಪರಿಸ್ಥಿತಿಯ ಒತಡಕ್ಕೆ ಸಿಕ್ಕಿ ನಲುಗುತ್ತಿರುವ ಶಿಕ್ಷಕ ದಿಕ್ಕು ತೋಚದಂತಾಗಿದ್ದಾನೆ. ಸತ್ಯನಿಷ್ಠೆ, ನೇರ ಪ್ರವೃತ್ತಿಯ ಶಿಕ್ಷಕನಂತೂ ಪ್ರಶಸ್ತಿ, ಪುರಸ್ಕಾರಗಳತ್ತ ಕಣ್ಣು ಬಿಡದೆ ಆತ್ಮಾವಲೋಕನ ನಿರತನಾಗಿ ರಾಷ್ಟ್ರಯಜ್ಞದಲ್ಲಿ ಸೇವಾ ಮುಖಿಯಾಗಿರುವುದೊಂದೇ ತೃಪ್ತಿತರುವ ವಿಚಾರ. ಐವತ್ತು ಅರುವತ್ತು ವರ್ಷಗಳ ಹಿಂದೆ ಕಾಣಬರುತ್ತಿದ್ದ ಶಿಕ್ಷಕರನ್ನು ಜ್ಞಾಪಿಸಿಕೊಂಡರೆ ಮನಸ್ಸು ಉಲ್ಲಾಸಪಡುತ್ತದೆ. ಆ ಕರ್ತವ್ಯನಿಷ್ಠೆ ಚಾರಿತ್ರ್ಯ ಶುದ್ಧಿ, ಪಾಂಡಿತ್ಯ ಪ್ರಖರಣೆ ಬರ ಬರುತ್ತ ಕಡಿಮೆಯಾಗುತ್ತಿರುವುದು ಶೋಚನೀಯವೆನಿಸುತ್ತದೆ. ಅಂದು ಶಿಕ್ಷಕ ಕೇವಲ ವಿದ್ಯಾರ್ಥಿಯ ಕಲ್ಯಾಣಕ್ಕೆ ಸೀಮಿತನಾಗಿರಲಿಲ್ಲ. ತಾನಿದ್ದ ಗ್ರಾಮದ 'ರಾಜಗುರು' ವಾಗಿದ್ದನೆಂಬುದನ್ನು ಸ್ಮರಿಸುವಾಗ ಅವನ ವ್ಯಕ್ತಿತ್ವದ ಅರಿವಾಗುತ್ತದೆ. ಇಂದು ಶಿಕ್ಷಕ ಮತ್ತೆ ಆ ಮಟ್ಟಕ್ಕೆ ಬರುವಂತಾದರೆ ನಾಡು ಧನ್ಯವಾದೀತು.

* * *

[ 5-9-96 ರಂದು ತುಮಕೂರಿನಲ್ಲಿ ಶಿಕ್ಷಕರ ದಿನಾಚರಣೆಯಲ್ಲಿ ಮಾಡಿದ ಆಶೀರ್ವಚನದಿಂದ ಸಂಗ್ರಹ ]

## -: ವೀರಶೈವ ಮಠಗಳ ಬಗ್ಗೆ ಮಾಹಿತಿ ಸಂಗ್ರಹ :-

### ಪ್ರಕಟಣೆ

ವೀರಶೈವ ಮಠಗಳು ನಮ್ಮ ನಾಡಿನ ಸಂಸ್ಕೃತಿ ಸಂವರ್ಧನೆಯಲ್ಲಿ ಪ್ರಮುಖ ಪಾತ್ರವಹಿಸಿವೆ. ಜನರಲ್ಲಿ ಧರ್ಮ ಜಾಗೃತಿ ಮೂಡಿಸಲು, ಅವರನ್ನು ಅಕ್ಷರಸ್ಥರನ್ನಾಗಿ ಮಾಡಲು, ಅವರ ಜೀವನವು ಪ್ರಸನ್ನವಾಗಲು ಅಮೋಘವಾದ ಕಾಣಿಕೆಯನ್ನು ನೀಡಿವೆ. ಪ್ರಸ್ತುತ ನಮ್ಮ ನಾಡಿನ ಹಳ್ಳಿ ಹಳ್ಳಿಗಳಲ್ಲಿ ಇರುವ ಮಠಗಳ ಮಾಹಿತಿ ಇಲ್ಲವಾಗಿದೆ. ವೀರಶೈವ ಮಠಗಳ ಸಂಖ್ಯೆ ಬೆಂಗಳೂರಿನ ಬಸವ ಸಮಿತಿಗೆ ಖಚಿತವಾಗಿ ತಿಳಿದುಬರುತ್ತಿಲ್ಲ. ನಮ್ಮ ನಾಡಿನ ಒಳ-ಹೊರ ಗಿರು ವೀರಶೈವ ಮಠಗಳ ಅಧ್ಯಯನ ಸ್ವಾರಸ್ಯಕರವಾದ ಸಂಗತಿಗಳನ್ನು ತಿಳಿಸುತ್ತದೆ. ಇಂಥ ವ್ಯಾಪಕವಾದ ಅಧ್ಯಯನ ಸಾಧ್ಯವಾಗದಿದ್ದರೂ ಅವುಗಳ ಸಂಕ್ಷಿಪ್ತವಾದ ಪರಿಚಯವನ್ನಾದರೂ ದಾಖಲಿಸಿಡಬೇಕೆಂಬ ಬಯಕೆಯನ್ನು ಬಸವದಸಮಿತಿ ಹೊಂದಿದೆ.

ಪ್ರತಿ ಜಿಲ್ಲೆ ಮತ್ತು ಆ ಜಿಲ್ಲೆಯ ತಾಲೂಕುಗಳು, ಹೋಬಳಿ ಮಟ್ಟದಲ್ಲಿ ಸಮೀಕ್ಷೆ ನಡೆಸಿ ಅಲ್ಲಿರುವ ಎಲ್ಲಾ ಮಠಗಳ ವಿವರಗಳನ್ನು ವಿಳಾಸ ಸಮೇತವಾಗಿ ಸಂಗ್ರಹಿಸಬೇಕಾಗುತ್ತದೆ.

ಈ ದೃಷಿಯಿಂದ ಸಾಹಿತಿಗಳು, ಮಠಗಳ ಸ್ವಾಮಿಗಳು ತಮ್ಮ ಗಮನಕ್ಕೆ ಬಂದ ತಮಗೆ ಸಂಬಂಧಿಸಿದ ಮಠದ ಪೂರ್ಣ ಮಾಹಿತಿಯನ್ನು ಅಂದರೆ ಮಠದ ಹೆಸರು, ವಿಳಾಸ, ಎಷ್ಟು ವರ್ಷಗಳಿಂದ ಆ ಮಠ ಇದೆ. ಸಂಕ್ಷಿಪ್ತವಾಗಿ ಅದರ ಚಟುವಟಿಕೆಗಳು ಆ ಮಠದಲ್ಲಿ ಆಗಿ ಹೋದ ಮತ್ತು ಈಗ ಇರುವ ಪೂಜ್ಯರ ಹೆಸರು ಇತ್ಯಾದಿ ಬರೆದು ಕಳಿಸಿದರೆ ಅವೆಲ್ಲವನ್ನು ತಾಲೂಕುವಾರು, ಜಿಲ್ಲಾವಾರು ವಿಂಗಡಿಸಿ ಪ್ರಕಟಿಸುವ ಯೋಜನೆಯನ್ನು ಕೈಗೆತ್ತಿಕೊಳ್ಳುವ ಅಂಶವನ್ನು ಬಸವ ಸಮಿತಿಯು ಹೊಂದಿದೆ.

ಇದು ರಾಜ್ಯಮಟ್ಟದಲ್ಲಿ ನಡೆಯಬೇಕಾದ ಮಾಹಿತಿ ಸಂಗ್ರಹ ಕಾರ್ಯವಾದ್ದರಿಂದ ಎಲ್ಲರ ನೆರವನ್ನು ನಾವು ಅಪೇಕ್ಷಿಸುತ್ತೇವೆ.

ಯಾವುದೇ ವೀರಶೈವ ಮಠದ ಬಗ್ಗೆ ಮಾಹಿತಿ ತಿಳಿದವರು ಪ್ರೊ. ಬಿ. ವಿರೂಪಾಕ್ಷಪ್ಪ, ಪ್ರಧಾನ ಸಂಪಾದಕರು "ಬಸವಪಥ" ಕನ್ನಡ ಮಾಸ ಪತ್ರಿಕೆ, ಬಸವ ಸಮಿತಿ, ಶ್ರೀ ಬಸವೇಶ್ವರ ವೃತ್ತ, ಬೆಂಗಳೂರು-5600 01 ಈ ವಿಳಾಸಕ್ಕೆ ಬರೆದು ತಿಳಿಸಬೇಕೆಂದು ಕೋರಲಾಗಿದೆ.

## ಶ್ರೀ ಸಿದ್ಧಲಿಂಗೇಶ್ವರ ವಚನ



ಇಷ್ಟಲಿಂಗ ಪ್ರಾಣಲಿಂಗವೆನ್ನುತಿಪ್ಪರು
ಇಷ್ಟಲಿಂಗದ ಪ್ರಾಣಲಿಂಗದ ಸುದ್ದಿಯನಾರು ಬಲ್ಲರಯ್ಯಾ ?
ಇಷ್ಟಲಿಂಗವನರಿದರೆ ಅನಿಷ್ಟ ಪರಿಹಾರವಾಗಿರಬೇಕು ನೋಡಾ
ಪ್ರಾಣಲಿಂಗವನರಿದರೆ ಪ್ರಪಂಚ ನಾಸ್ತಿಯಾಗಿರ ಬೇಕು ನೋಡಾ
ಇಷ್ಟವು ಪ್ರಾಣವು ಒಂದೆಯೆಂದರಿದು ಬಡವೆರಸಿದ ಬಳಿಕ
ಜಾಗ್ರ ಸ್ವಪ್ನಸುಷಿಪ್ತಿಯೆಂಬ ತ್ರಿವಿಧಾವಸ್ಥೆಯಲ್ಲಿ
ಲಿಂಗವಲ್ಲದೆ ಮತ್ತೇನನು ತೋರಲಾಗದು ನೋಡಾ
ಆ ಮಹಾತ್ಮನು ಸರ್ವಾಂಗ ಪ್ರಾಣಲ್ಲಿಂಗಮೂರ್ತಿ ಕಾಣಾ
ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ !

ಬಹುಜನರು ಕೇವಲ ಬಾಯಿಂದ ಇಷ್ಟಲಿಂಗ, ಪ್ರಾಣಲಿಂಗ ಎಂದು ನುಡಿಯುತ್ತಿರುವರೇ ಹೊರತು ಅವುಗಳ ನಿಜವಾದ ಸ್ಥಿತಿಯನ್ನು ತಿಳಿಯುವುದಿಲ್ಲ. ಇಷ್ಟಲಿಂಗವನ್ನು ಅರಿತರೆ ಎಲ್ಲ ಅನಿಷ್ಟಗಳೂ ಪರಿಹಾರವಾಗಬೇಕು. ಪ್ರಾಣಲಿಂಗವನ್ನು ಅರಿತರೆ ಪ್ರಪಂಚವೆಲ್ಲ ಇಲ್ಲದಾಗಬೇಕು. ಒಂದೇ ಲಿಂಗವು ಇಷ್ಟ ಪ್ರಾಣಲಿಂಗವಾಗಿರುತ್ತದೆ. ಇಷ್ಟಲಿಂಗವು ಬಹಿರಂಗಕ್ಕೆ ಸಂಬಧವಾಗಿದ್ದರೆ ಪ್ರಾಣಲಿಂಗವು ಅಂತರಂಗಕ್ಕೆ ಸಂಬಂಧಪಟ್ಟಿರುವುದು. ಹೀಗೆ ಇಷ್ಟ ಪ್ರಾಣಲಿಂಗಗಳ ನಿಜಸ್ಥಿತಿಯನ್ನು ಅರಿತುಕೊಂಡವರ ಮೂರು ಅವಸ್ಥೆಗಳಲ್ಲಿಯೂ ಲಿಂಗವೇ ತುಂಬಿಕೊಳ್ಳುವುದು. ಅಂಥ ಮಹಾತ್ಮರು ಲಿಂಗರೂಪಿಗಳೇ ಆಗುವರು.

(ಕೃಪೆ-ಸಟ್‌ಸ್ಥಲ ಜ್ಞಾನಸಾರಾಮೃತ-ಶ್ರೀ ತೋಂ. ಸಿ.ಕೈಂ. ಸೇ. ಸಂಘ-ಎಡೆಯೂರು-ಗದಗ)

**ಲೇಖಕರಲ್ಲಿ ಮನವಿ**

"ಸಿದ್ಧಗಂಗಾ" ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ, ಮೇಲಾಗಿ ಶ್ರೀ ಮಠದ ಮುಖವಾಣಿ. ಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ 32ನೇ ವರ್ಷಕ್ಕೆ ಪಾದಾರ್ಪಣೆ ಮಾಡಿದೆ. ತ್ರಿವಿಧ ದಾಸೋಹ ತತ್ಪರತೆಯಿಂದ ಮುನ್ನಡೆಯುತ್ತಿರುವ ಪತ್ರಿಕೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ, ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

"ಸಂಪಾದಕರು"
**'ಸಿದ್ಧಗಂಗಾ' ಮಾಸ ಪತ್ರಿಕೆ**
ಶ್ರೀ ಸಿದ್ಧಗಂಗಾಮಠ
ತುಮಕೂರು ಜಿಲ್ಲೆ–572104.

ವಾರ್ಷಿಕ ಚಂದಾ 35-00 ರೂ
ಆಜೀವ ಸದಸ್ಯತ್ವ 500-00

## ಸಂಪಾದಕೀಯ

"ಬಲದಕೈಯಲಿ ‘ಓಜುಗಟ್ಟಿಗೆ ಎಡದಕೈಯಲಿ ಹಾಲಬಟ್ಟಲು’ ಹಿಡಿದು ಕಲಿಸಲು ಬರುತ್ತಾನೆ ಗುರುವೆಂದು ಬಸವಣ್ಣನವರು ತಮ್ಮ ಒಂದು ವಚನದಲ್ಲಿ ನುಡಿದಿದ್ದಾರೆ. ಶಿಕ್ಷಕನ ವೃತ್ತಿ ಪ್ರವೃತ್ತಿಗಳನ್ನು ಇಷ್ಟು ಸುಂದರವಾಗಿ ವಿವರಿಸುವ ಸೂತ್ರ ಮತ್ತೊಂದು ಕಾಣದು. ಶಿಕ್ಷಕನಾದವನು ಅನುಸರಿಸಬೇಕಾದ ಮಾರ್ಗದರ್ಶಿಯಾದ ಈ ವಾಕ್ಯ ಶಿಕ್ಷಕ ವೃಂದ ಮತ್ತೆ ಮತ್ತೆ ಚಿಂತನ-ಮಂಥನ ಮಾಡುವಂತಿದೆ. ಶಿಕ್ಷಕ ಬರೀ ಪಾಂಡಿತ್ಯಗಳಿಸಿದರೆ ಸಾಲದು ಪರಿಜ್ಞಾನವನ್ನೂ ಪಡೆದಿರಬೇಕು. ಒಬ್ಬ ವಿಜ್ಞಾನ ಪದವೀಧರನಿದ್ದ, ಶಿಕ್ಷಕನಾಗಿದ್ದ, ಕೆಲಸಕ್ಕೆ ಸೇರಿದ ಮೇಲೆ ಮದುವೆ ಮಾಡಿಕೊಂಡ. ಪತ್ನಿಯನ್ನು ಕರೆತಂದು ಸಂಸಾರ ಹೂಡಿದ. ಮನೆಯಲ್ಲಿ ಪ್ರಯೋಗಶಾಲೆ ಇಟ್ಟುಕೊಂಡು ಸಂಶೋಧನೆಯಲ್ಲಿ ನಿರತನಾಗಿರುತ್ತಿದ್ದ. ಒಮ್ಮೆ ಅವನ ಹೆಂಡತಿ ಈರುಳ್ಳಿ ಹಚ್ಚುವಾಗ ಬೆರಳು ಹಚ್ಚಿಕೊಂಡಳು ರಕ್ತಬಂತು. ನೋವಿನಿಂದ ಚೀರಿದಳು. ತರುಣ ವಿಜ್ಞಾನಿ ಬಂದು ನೋಡಿದ. ತನ್ನಾಕೆ ಅಳುತ್ತಿದ್ದಳು. ಬೆರಳಿನಲ್ಲಿ ರಕ್ತ ಬರುತ್ತಿತ್ತು. ಒಂದು ಕ್ಷಣನಿಂತ, ಒಳಗೆ ಪ್ರಯೋಗ ಶಾಲೆಗೆ ಓಡಿದ. ಒಂದು ಟೆಸ್ಟ್ ಟ್ಯೂಬ್ ತಂದ. ಅಳುತ್ತಿದ್ದ ತನ್ನಾಕೆಯ ಕಣ್ಣೀರು ಹಿಡಿದುಕೊಂಡು. ಪ್ರಯೋಗಶಾಲೆಗೆ ಹೋಗಿ ಅಕಣ್ಣೀರಿನ ಪರೀಕ್ಷೆ ನಡೆಸಿದ. ಫಲಿತಾಂಶ ಕಂಡುಹಿಡಿದ. ಆಮ್ಲ ಜನಕ, ಜಲಜನಕ, ಲವಣಾಂಶ ಇಷ್ಟಿಷ್ಟಿದೆಯೆಂದು ಒಂದು ನಕ್ಷೆ ತೆಗೆದ. ಪತ್ನಿಗೆ ಹೇಳಿದ. "ನಿನಗೆ ಹೆಚ್ಚು ದುಃಖವೇನಾಗಿಲ್ಲ"-ಎಂದು. ಪತ್ನಿ ತನ್ನ ಭಾಗ್ಯವನ್ನು ಹಳಿದು ಕೊಂಡು ಸುಮ್ಮನಾದಳು. ಒಂದುವಾರದ ನಂತರ ಅವರ ಮನೆಗೆ ಒಂದು ಟೆಲಿಗ್ರಾಂ ಬಂತು. ಆಪತ್ನಿಯೇ ಅದನ್ನು ತೆಗೆದುಕೊಂಡು ತೆರೆದು ಓದಿದಳು. ತನ್ನ ತಂದೆ ನಿಧನರಾದ ಸುದ್ದಿ ಅಲ್ಲಿತ್ತು. ಆಕೆಗೆ ದುಃಖ ಉಮ್ಮಳಿಸಿತ್ತು. ಬಿಕ್ಕಿ ಬಿಕ್ಕಿ ಅಳಲು ತೊಡಗಿದಳು. ಸಂಶೋಧನಾ ನಿರತನಾಗಿದ್ದ ವಿಜ್ಞಾನಿ ಹೊರಬಂದು ನೋಡಿದ. ಅಳುತ್ತಿದ್ದವಳ ಕಣ್ಣೀರು ಧಾರಾಕಾರ. ಮತ್ತೆ ಪ್ರಯೋಗ ಧಾವಿಸಿದ. ಟೆಸ್ಟ್ ಟ್ಯೂಬ್ ತಂದು ಅವಳ ಕಣ್ಣೀರು ಸಂಗ್ರಹಿಸಿ ಪುನಃ ಪರೀಕ್ಷಿಸಿದ. ಹಿಂದೆ ಪರೀಕ್ಷಿಸಿದಾಗ ಎಷ್ಟೆಷ್ಟು ಪ್ರಮಾಣದಲ್ಲಿ ಆಮ್ಲ ಜನಕ, ಜಲಜನಕ, ಲವಣಾಂಶವಿತ್ತು, ಈಗಲೂ ಆ ಪ್ರಮಾಣದಲ್ಲೇ ಕಂಡು ಬಂತು. ಅವನು ಒಂದು ಸಿದ್ಧಾಂತಕ್ಕೆ ಬಂದು ತನ್ನ ಪತ್ನಿಗೆ ಹೀಗೆಂದ. ಬೆರಳು ಹಚ್ಚಿಕೊಂಡ ದಿನ ನಿನಗೆ ಎಷ್ಟು ದುಃಖವಾಗಿತ್ತೋ ನಿನ್ನ ತಂದೆ ಸತ್ತಾಗಲೂ ಆಗಿರುವ ದುಃಖ ಒಂದೇ ಆಗಿದೆ. ಇದಕೇಕೆ ಇಷ್ಟೊಂದು ಪ್ರಲಾಪ ಎಂದ.

ಶಿಕ್ಷಕ ಇಂತಹ ಪಾಂಡಿತ್ಯಕ್ಕೆ ಮರುಳಾಗುವುದಕ್ಕಿಂತ, ನೋವು ನಲಿವುಗಳಿಗೆ ಸ್ಪಂದಿಸುವ ಹೃದಯವಂತಿಕೆಯನ್ನುಳ್ಳವನಾಗುವಲ್ಲಿ ಆತ್ಮ ಕಲ್ಯಾಣ, ಸಮಾಜ ಕಲ್ಯಾಣ ಅಡಗಿದೆ ಎನ್ನುತ್ತಾರೆ ಪ್ರಾಜ್ಞರು.

'ಲಾಕ್' ಎಂಬ ಶಿಕ್ಷಣ ತಜ್ಞನ ಈ ಮಾತು ನೋಡಿ. ಶಿಕ್ಷಣ ಸಭ್ಯ ವ್ಯಕ್ತಿ ರೂಪುಗೊಳ್ಳುವ ಆರಂಭ. ಆದರೆ ಅಧ್ಯಯನ, ಸತ್ಯಹವಾಸ, ಮತ್ತು ಪ್ರತಿಫಲನ ಅವನನ್ನು ಪೂರ್ಣವೆನಿಸಬೇಕು. ಶಿಕ್ಷಣ ನೀಡುವ ಶಿಕ್ಷಕ ಇದನ್ನು ತಿಳಿದು ಆಚರಣೆಯಲ್ಲಿಟ್ಟುಕೊಂಡಾಗ ತಾನೆ ಪರಿಪೂರ್ಣ ವ್ಯಕ್ತಿಯನ್ನು ರೂಪಿಸಲು ಸಾಧ್ಯವಾಗುವುದು. ಶಿಕ್ಷಕ ಕಲಿಯಬೇಕೆಂಬ ಆಸಕ್ತಿಯುಳ್ಳ ವಿದ್ಯಾರ್ಥಿಯನ್ನು ಸ್ಫೂರ್ತಿಗೊಳಿಸದೆ ಬೋಧಿಸಲು ಯತ್ನಿಸುವುದೆಂದರೆ ತಣ್ಣನೆಯ ಕಬ್ಬಿಣವನ್ನು ಸುತ್ತಿಗೆಯಿಂದ ಬಡಿದಂತೆ ಎಂಬ ಮಾತಿನಲ್ಲಿ ಅದೆಷ್ಟೊಂದು ಸತ್ಯವಿದೆ. ಶಿಕ್ಷಕನಾಗಬೇಕೆಂದು ಆಶಿಸುವ ಪ್ರತಿಯೊಬ್ಬ ವ್ಯಕ್ತಿಯ ನಿಜವಾದ ಗುರಿ, ತನ್ನ ಅಭಿಪ್ರಾಯಗಳನ್ನು ವಿದ್ಯಾರ್ಥಿಗಳ ಮೇಲೆ ಹೇರುವುದಲ್ಲ, ಅವರ ಮನಸ್ಸನ್ನು ಜಾಗೃತಗೊಳಿಸುವುದು.

ಅಪಾಯದ ಅಂಚಿನಲ್ಲಿರುವ ಜಗತ್ತನ್ನು ಸಂರಕ್ಷಿಸುವ ಶಕ್ತಿ ಕೇವಲ ತಾಯಿ ಮತ್ತು ಶಿಕ್ಷಕನಿಗೆ ಮಾತ್ರ ಇದೆ ಎಂಬ ಪೂಜ್ಯ ಶ್ರೀ ಶ್ರೀಗಳವರ ಮಾತಿನಲ್ಲಿ ಅದೆಂಥ ಅರ್ಥ ಅಡಗಿದೆ.

ಒಬ್ಬ ಕೆಟ್ಟ ಶಿಕ್ಷಕ ಸದಾ ಗೊಣಗುತ್ತಾನೆ, ಒಬ್ಬ ಸಾಮಾನ್ಯ ಶಿಕ್ಷಕ ವಿವರಣೆ ನೀಡುತ್ತಾನೆ, ಒಬ್ಬ ಒಳ್ಳೆಯ ಶಿಕ್ಷಕ ಬೋಧಿಸುತ್ತಾನೆ, ಒಬ್ಬ ಮಹಾ ಶಿಕ್ಷಕ ಸ್ಫೂರ್ತಿನೀಡುತ್ತಾನೆ.

ಬುದ್ಧ, ಬಸವ, ಗಾಂಧಿ, ಡಾ|| ರಾಧಾಕೃಷ್ಣ ಅವರಂಥವರು ಲೋಕಶಿಕ್ಷಕರೆಂದು ಗೌರವಾರ್ಹರಾಗಿದ್ದಾರೆ.

**ವಾಚಕರಲ್ಲಿ ವಿನಂತಿ**

ಸೆಪ್ಟಂಬರ್ ಮಾಹೆಯಲ್ಲಿ ಅತಿವೃಷ್ಟಿಯಿಂದಾಗಿ ಮುದ್ರಣಾಲಯ ನೀರಿನಿಂದ ಆವೃತವಾಗಿ ಪ್ರತಿಕೂಲವಾದ ಪ್ರಯುಕ್ತ ಸೆಪ್ಟಂಬರ್-ಅಕ್ಟೋಬರ್ ಸಂಚಿಕೆಗಳನ್ನು ಒಟ್ಟಾಗಿ ಸೇರಿಸಿದೆ. ಮಾನ್ಯ ಓದುಗರು ದಯಮಾಡಿ ಸಹಕರಿಸಬೇಕಾಗಿ ಕೋರಲಾಗಿದೆ.

ಪ್ರಕಾಶಕರು.

# ಹೊಳಪು ಕಂಡ ಮೌಲ್ಯಾಧಾರಿತ ಶಿಕ್ಷಣ

ಆರ್. ಜಿ. ಶ್ಯಾನಭಾಗ, ಹೊನ್ನಾವರ ಶರಾವತಿ ಪ್ರೌಢಶಾಲೆ, ಹೊಸಾಡ,
ಹೊನ್ನಾವರ. (ಉ.ಕ.)

ಇಂದಿನ ಶಿಕ್ಷಣ ವ್ಯವಸ್ಥೆ ಸಮಸ್ಯೆಗಳ ಆಗರವಾಗಿರುವ ಸಾಗರ. 21 ನೇ ಶತಮಾನದಲ್ಲಿ ಹಲವಾರು ಸವಾಲುಗಳು ಈ ಅವ್ಯವಸ್ಥಿತ ಶಿಕ್ಷಣ ಕ್ರಮದಿಂದ ಉದ್ಭವಿಸಬಹುದೆಂದು ಕಳವಳವನ್ನು ಶಿಕ್ಷಣವೇತ್ತರು ವ್ಯಕ್ತಪಡಿಸಿದ್ದಾರೆ. ಪ್ರಾಥಮಿಕ ಹಂತದಿಂದ ಉನ್ನತ ಶಿಕ್ಷಣದ ಹಂತದವರೆಗೆ ಶಿಕ್ಷಣಕ್ಕೆ ಪರೀಕ್ಷೆ ಬರವಣಿಗೆ ಹಾಗೂ ಜ್ಞಾನದ ಒಲವೇ ಕಾಣುತ್ತಿದೆ. ಶಿಕ್ಷಣ ಕೌಶಲ್ಯ ಹಾಗೂ ಮೌಲ್ಯಗಳಿಂದ ವಂಚಿತವಾಗಿದೆ ಎಂದು ನಿಖರವಾಗಿ ಗೋಚರವಾಗುತ್ತದೆ. ಶಿಕ್ಷಣ ಕ್ಷೇತ್ರದಲ್ಲಿ ಇದೊಂದು ಬಿಡಿಸಲಾಗದ ಒಗಟು.

ಆದುದರಿಂದಲೇ ರೋಗಗ್ರಸ್ತ ಹಾಗೂ ಶಾಪಗ್ರಸ್ತವಾಗಿರುವ ಸಮಗ್ರ ಶಿಕ್ಷಣ ವ್ಯವಸ್ಥೆಯ ಮೇಲೆ ಹೊಸದಾಗಿ ಅಸ್ತಿತ್ವದಲ್ಲಿ ಬಂದಿರುವ ಶಿಕ್ಷಣ ನೀತಿ ತನ್ನ ಕ್ಷ-ಕಿರಣವನ್ನು ಚೆಲ್ಲಿ ಹಲವಾರು ಚಿಕಿತ್ಸಾ ವಿಧಾನವನ್ನು ನೀಡಿದೆ. ಈ ನಿಟ್ಟಿನಲ್ಲಿ ಮೌಲ್ಯಾಧಾರಿತ ಶಿಕ್ಷಣವು ಒಂದಾಗಿದೆ.

ನೂತನ ರಾಷ್ಟ್ರೀಯ ಶಿಕ್ಷಣ ನೀತಿ ಮೌಲ್ಯಾಧಾರಿತ ಶಿಕ್ಷಣಕ್ಕೆ ಅಧಿಕ ಒತ್ತನ್ನು ನೀಡಿರುವುದು ಸ್ವಾಗತಾರ್ಹ ಬದಲಾವಣೆಯೇ ಆಗಿದೆ. ಈ ನಿಟ್ಟಿನಲ್ಲಿ ಸೇವಾನಿರತ ಶಿಕ್ಷಕರಿಗಾಗಿ ಪ್ರೌಢಶಾಲಾ ಮಟ್ಟದಲ್ಲಿ ಪುನಶ್ಚೇತನ ತರಬೇತಿ ಕಾರ್ಯಕ್ರಮವನ್ನು ಕಳೆದ ಮೂರು ವರ್ಷಗಳಿಂದ ನಡೆಸಲಾಗುತ್ತಿದೆ. ಅವರಿಗೆ ನೀಡಲಾದ ಶಿಕ್ಷಣ ನೀತಿಯ ಕೈಪಿಡಿಯಲ್ಲಿ ಮೌಲ್ಯಾಧಾರಿತ ಶಿಕ್ಷಣದ ಕುರಿತಾಗಿ ಪ್ರತ್ಯೇಕವಾದ ಕೋಶ ಬಂದಿದೆ. ಕೋಶವೆಂದರೆ ಚರ್ಚಾ ರೂಪದಲ್ಲಿರುವ ಸಿದ್ಧಾಂತವನ್ನು ಅನುಷ್ಠಾನಕ್ಕೆ ತರುವ ವ್ಯವಸ್ಥೆ ಎಂದರ್ಥ. ಶಿಕ್ಷಕರನ್ನು ಪ್ರಪ್ರಥಮವಾಗಿ ಮೌಲ್ಯಾಧಾರಿತ ಶಿಕ್ಷಕರನ್ನಾಗಿ ಸ್ಥಾಪಿಸಿ ತನ್ಮೂಲಕವಾಗಿ ಮೌಲ್ಯಾಧಾರಿತ ಬೋಧನೆಯನ್ನು ತರಗತಿಯಲ್ಲಿ ಅನುಷ್ಠಾನಕ್ಕೆ ತರುವುದೇ ಕೋಶದ ಉದ್ದೇಶ.

**ಮೌಲ್ಯಗಳ ಪುನರುತ್ಥಾನ :-** ಮೌನವಾಗಿ ಕ್ರಾಂತಿಯನ್ನೆಸಗುತ್ತಿರುವ ಗುರುಕುಲ ಪದ್ಧತಿಯು ಮಾಯವಾಗಿರುವುದರಿಂದ ಮೌಲ್ಯಗಳು ಅವಸಾನಗೊಳ್ಳುತ್ತಿವೆ ಶಿಕ್ಷಣ ಪ್ರಸಾರಕ್ಕೆ ಇಂದು ಬಹುಮುಖಗಳು. ಕಲಿಯುವ ಮಗು ಔಪಚಾರಿಕ ಹಾಗೂ ಅನೌಪಚಾರಿಕ ಶಿಕ್ಷಣವನ್ನು ಪಡೆಯುತ್ತಿದೆ. ಸಮೂಹ ಮಾಧ್ಯಮ ಮನೆಯ ಪರಿಸರ ಗ್ರಂಥಾಲಯ ನಿಯತಕಾಲಿಕಗಳು, ವಿಚಾರ ಸಂಕೀರ್ಣ ಹಾಗೂ ಚಲನಚಿತ್ರ

ಮೊದಲಾದ ಸಾಧನಗಳು ಶಿಕ್ಷಣವನ್ನು ನೀಡುವ ಶಾಲೇತರ ಸಾಧನಗಳಾಗಿವೆ. ಅವು ಗಳ ಪ್ರಭಾವದಿಂದಾಗಿ ವೈವಿಧ್ಯಮಯ ಹೊಸ ಮೌಲ್ಯಗಳು ತಲೆಯೆತ್ತುತ್ತಿವೆ. ಶೀಲಕ್ಕಿಂತ, ಅಶ್ಲೀಲ ಪ್ರಭಾವವೇ ಹೆಚ್ಚಾಗಿರುವುದರಿಂದ ಮೌಲ್ಯದಿಂದ ವಂಚಿತವಾಗಿರುವ ಸಾಮಾಜಿಕ ವ್ಯವಸ್ಥೆಯಲ್ಲಿ ನಿರ್ದಯತೆಯು ಕ್ರೂರವಾಗಿ ತಲೆಯೆತ್ತುತ್ತಿದೆ; ಎಂದು ಶಿಕ್ಷಣವೇತ್ತರು ಶಿಕ್ಷಣ ತಮ್ಮ ನೂತನ ಶಿಕ್ಷಣ ನೀತಿಯಲ್ಲಿ ಕಳವಳವನ್ನು ವ್ಯಕ್ತ-ಪಡಿಸಿರುವರು.

ಗುರುಕುಲ ಪದ್ಧತಿಯಲ್ಲಿ ಆತ್ಮಾನಂದ ಹಾಗೂ ಆತ್ಮಸಾಕ್ಷತ್ಕಾರಕ್ಕೆ ಹೆಚ್ಚಿನ ಅವಕಾಶವಿದ್ದಿತು. ಶಿಕ್ಷಣವೆನ್ನುವುದು ವಸ್ತು ವಿಷಯಕ ಜ್ಞಾನವಲ್ಲ. ಹೊರಗಿನ ವಸ್ತುವಿಗಿಂತ ವೈಯಕ್ತಿಕತೆ ಹಾಗೂ ಆಂತರಿಕ ಜಗತ್ತಿಗೆ ಪ್ರಾಚೀನ ಶಿಕ್ಷಣಕ್ರಮ ಪ್ರಾಧಾನ್ಯತೆಯನ್ನು ನೀಡಿತ್ತು. ವ್ಯಕ್ತಿಗತ ಮನೋಭಾವ, ಆತ್ಮೀಯತೆ ಹಾಗೂ ಸೌಹಾರ್ದತೆಗಳು ಶಿಕ್ಷಣವನ್ನು ರೂಪಿಸಿದ್ದವು. ಹೃನ್ಮನಸ್ಸನ್ನು ಅರಳಿಸುವ ನಿಟ್ಟಿನಲ್ಲಿ ಶಿಕ್ಷಣವು ಸಾಂಸ್ಕೃತಿಕ ವಾಹಕವಾಗಿ ಸಾಗುತ್ತಿತ್ತು. ಶಿಕ್ಷಣವು ಸತ್ಪರಂಪರೆಗೆ ಮಾರ್ಗವನ್ನು ಸೃಷ್ಟಿಸಿತ್ತು. ಮಧುರಬಾಂಧವ್ಯ ಶೀಲಸಂವರ್ಧನೆ ಶ್ರಮಗೌರವ ಉದ್ಯಮಶೀಲತೆ, ಸಾಮಾಜಿಕ ಸೇವಾ ಮನೋಭಾವ ಮತ್ತು ಸ್ವಯಂ ಪೂರ್ಣತೆಯನ್ನು ವಿದ್ಯಾರ್ಥಿಗಳಲ್ಲಿ ಒಡಮೂಡಿಸಬೇಕಾದ ಅಗತ್ಯ ನೂತನ ಶಿಕ್ಷಣನೀತಿ ಒತ್ತಿ ಹೇಳುತ್ತಿದೆ.

**ಮೌಲ್ಯದ ಹಿನ್ನೋಟ :–** ವಿಜ್ಞಾನದ ಪ್ರಭಾವ, ಪಾಶ್ಚಾತ್ಯನಾಗರಿಕತೆಯ ಅನುಕರಣೆ, ಸ್ಥಗಿತಗೊಳ್ಳುತ್ತಿರುವ ಧರ್ಮದಿಂದಾಗಿ ಬದುಕು ಯಾಂತ್ರೀಕೃತ ಗೊಳ್ಳುತ್ತಿರುವುದರಿಂದ ಮಾನವನು ಜೀವನದ ಚಿರಂತನ ಮೌಲ್ಯಗಳನ್ನು ಗಾಳಿಗೆ ತೂರುತ್ತಿದ್ದಾನೆ. ಸತ್ಯ, ಸಹನೆ, ಸಹಕಾರ, ಪ್ರಾಮಾಣಿಕತೆ, ನಿಷ್ಪಕ್ಷಪಾತತನ, ಐಕ್ಯತೆ ಪರೋಪಕಾರ ಹಾಗೂ ಪ್ರಜ್ಞೆಗಳೆಲ್ಲವನ್ನು ಮರೆತಿರುವವನು ಸಂಪೂರ್ಣ ಮಾನವನನ್ನು ರೂಪಿಸುವುದೇ ಶಿಕ್ಷಣದ ನಿಜಗುರಿ. ಚಾರಿತ್ರ್ಯವನ್ನು ಸೃಷ್ಟಿಸದ ಶಿಕ್ಷಣವೆಂದರೆ ಪಾಪ ಎಂದು ಗಾಂಧಿಯವರು ಪವಿತ್ರತೆ ಎನ್ನುವುದು ಜ್ಞಾನ ಆತ್ಮನಿರೀಕ್ಷಣೆಯಿಂದ ತನ್ನನ್ನು ತಾನು ಅರಿತು ಜ್ಞಾನ ಸಂಪಾದನೆಗಾಗಿ ಪ್ರಾಮಾಣಿಕ ಪ್ರಯತ್ನ ವಿದ್ಯಾರ್ಥಿಯಾದವನು ಮಾಡಬೇಕೆಂದು ಗ್ರೀಕ್ ತತ್ವಜ್ಞಾನಿ ಸಾಕ್ರೇಟಿಸನ ಅಭಿಪ್ರಾಯವಾಗಿದೆ. ಮಕ್ಕಳ ಸ್ವಭಾವಕ್ಕೆ ತಕ್ಕಂತೆ ವಿಕಸಿತ ಗೊಳಿಸುವುದೇ ನಿಜ ಶಿಕ್ಷಣ. ನೈಜ, ನಿರ್ಮಲ ಹಾಗೂ ಸಹಜ ಶಿಕ್ಷಣ ಪದ್ಧತಿಯಿಂದ ಬೋಧನೆ ಜರುಗಬೇಕೆನ್ನುತ್ತಾನೆ. ಫ್ರಾನ್ಸದೇಶದ ಶಿಕ್ಷಣವೇತ್ತ ರೂಸೋ ಸಮಾಜ ಸುಧಾರಿಸಲು ಶಿಕ್ಷಣ ಸಾರ್ವತ್ರಿಕವಾಗಬೇಕು, ಮಕ್ಕಳನ್ನು ತನ್ನೆಡೆಗೆ ಆಕರ್ಷಿಸಲು ಶಾಲೆಗಳು ಮನೆಯಂತಹ ಪರಿಸರವನ್ನು ಸೃಷ್ಟಿಸಬೇಕು; ಪ್ರೇಮ ಪೂರ್ಣವಾತಾವರಣದಿಂದಾಗಿ ಮಗುವಿನಲ್ಲಿ ನೈತಿಕ ಮೌಲ್ಯಗಳು ಒಡಮೂಡಿ ಬರುತ್ತವೆ; ಎನ್ನುವುದು ಸ್ವಿಡ್ಜರ್‌ಲೆಂಡಿನ ಶಿಕ್ಷಣವೇತ್ತ ಜೋಡನ ಹ್ಯಾನ್ರಿಕನ



ಅಭಿಪ್ರಾಯ. ಒಳ್ಳೆಯ ನಡತೆ ಮತ್ತು ವಿದ್ವತ್ತು ಬೆಳೆಸುವುದೇ ಶಿಕ್ಷಣದ ಪರಮ ಗುರಿ ಎನ್ನುವುದು ಶಿಕ್ಷಣಾಭಿಮಾನಿ ಮಾನ್ವೇಗನ್ ದೃಷ್ಟಿಕೋನವಾಗಿದೆ. ವಿಶ್ವದ ಶಿಕ್ಷಣ-ವೇತ್ತರ ಅಭಿಪ್ರಾಯಗಳನ್ನು ಮೌಲ್ಯಮಾಪನ ಮಾಡಿದರೆ ಮಾನವ ಮಾನವರ ಮಧ್ಯ ಸೌಹಾರ್ದ ಸಂಬಂಧ ಏರ್ಪಡಿಸುವುದೇ ಸರ್ವಸಮ್ಮತವೆಂಬ ಅಭಿಪ್ರಾಯವಾಗಿದೆ. ಸೌಹಾರ್ದತೆ, ಇದು ಮಾನವನ ಅಂತರಂಗ ಶುದಿಗೆ ಸಂಬಂಧಿಸಿರುವ ವಿಷಯವೇ ಆಗಿದ್ದು, ಮೌಲ್ಯ ರೂಢಿಸುವ ಕ್ರಿಯೆಯೇ ಆಗಿರುವುದು.

ನೈತಿಕ ಹಾಗೂ ಸಾಮಾಜಿಕ ಜೀವನದ ಗುಣಮಟ್ಟ ಅವನತಿಯನ್ನು ಹೊಂದುತ್ತಿದೆ; ಎಂದು ಸಮಾಜದ ಹಿರಿಯರು ಖೇದವನ್ನು ವ್ಯಕ್ತಪಡಿಸುತ್ತಿದ್ದಾರೆ. ಆದರಿಂದ ಸಮಾಜದಲ್ಲಿ ನಿರ್ದಯತೆಯು ಹೆಚ್ಚುತ್ತಿದೆ. ಶಿಕ್ಷಣದ ಮೂಲಕ ಸಹೃದಯವಂತ ಸಮಾಜವನ್ನು ಸೃಷ್ಟಿಸಬಹುದೆಂದು ನೂತನ ರಾಷ್ಟ್ರೀಯ ಶಿಕ್ಷಣ ನೀತಿ ಗುರುತಿಸಿದೆ. ನೈತಿಕ ಧಾರ್ಮಿಕ ಹಾಗೂ ಸೌಂದರ್ಯೋಪಾಸಕ ಮೌಲ್ಯಗಳನ್ನು ರೂಪಿಸಲು ಕ್ರಮಬದ್ಧವಾದ ಸಮಾಜಿಕ ವ್ಯವಸ್ಥೆಯಾದ ಶಿಕ್ಷಣವೊಂದರಿಂದ ಮಾತ್ರ ಇದು ಸಾಧಿಸುವದು ಸಾಧ್ಯದ ವಿಷಯವಾಗಿದೆ. ಮೌಲ್ಯಾಧಾರಿತ ಶಿಕ್ಷಣವು ಶಿಕ್ಷಣ ಮತ್ತು ಮೌಲ್ಯ ಸಂಬಂಧ, ಮೌಲ್ಯಶಿಕ್ಷಣದ ಅಗತ್ಯತೆ ಮೌಲ್ಯಶಿಕ್ಷಣದ ಧ್ಯೇಯ, ವಿವಿಧ ಆಕಾರ ಮೌಲ್ಯ ಶಿಕ್ಷಣ ಬೋಧನೆಯ ಕಾಲದಲ್ಲಿ ಶಿಕ್ಷಣ ಪಾತ್ರ ಇವೆಲ್ಲವುಗಳನ್ನು ಗುರುತಿಸಿ ಅನುಷ್ಠಾನಗೊಳಿಸಲು ಸಜ್ಜುಗೊಂಡಿವೆ.

**ಮೌಲ್ಯಗಳಂದರೇನು ?** ಮಾನವರು ಇಚ್ಛಿಸುವ ಆಶಿಸುವ, ಅಪೇಕ್ಷಿಸುವ ಮತ್ತು ಹಿತಕರವೆನಿಸುವ ವಸ್ತು ವಿಷಯಗಳಿಗೆ ಸಂಬಂಧಪಟ್ಟಿರುವ ಮನೋಭಾವನೆಗಳೇ ಮೌಲ್ಯಗಳು. ಇದು ಬದುಕಿನ ಅಗತ್ಯಗಳಿಗೆ ಸಂಬಂಧಿಸಿರುವ ವಿಷಯವೇ ಆಗಿರಬಹುದು, ಇಲ್ಲವೇ ಸತ್ಯಸುಖ ಶಾಂತಿ ಮೊದಲಾದ ಅಧ್ಯಾತ್ಮಿಕ ಗುಣಗಳಾಗಿರಬಹುದು. ಸಮರ್ಥ ಸಮಾಜ ಜೀವಿಯಾಗಿ ಬಾಳಲು ವಿದ್ಯಾರ್ಥಿಗಳಲ್ಲಿ ಇದು ಒಡಮೂಡಿ ಬರಬೇಕಾಗಿದೆ. ಇದಕ್ಕಾಗಿ ಜ್ಞಾನ ಕುಶಲತೆ, ಮನೋಭಾವನೆ ಮೌಲ್ಯಗಳು ಅವರಲ್ಲಿ ಬೆಳೆಸುವ ಅಗತ್ಯವಿದೆ. ಈ ಮಾನವೀಯ ಮೌಲ್ಯಗಳು ಹೊಸ ಪಠ್ಯಕ್ರಮದಲ್ಲಿ ಯೋಜಿತವಾಗಿದೆ. ಸಾಂಸ್ಕೃತಿಕ ಪರಂಪರಯಿಂದ ಅದು ಹಿತಕರ ಅನುಭವಗಳೆಲ್ಲವನ್ನು ಸುವ್ಯವಸ್ಥಿತವಾಗಿ ಇದರಲ್ಲಿ ಸಂಗ್ರಹಿಸಲ್ಪಟ್ಟಿದೆ. ಶಿಕ್ಷಣದ ಮೂಲಕ, ಮೌಲ್ಯ ಬೋಧನೆಯನ್ನು ಮಾಡಿ, ಅವುಗಳನ್ನು ಕಾಪಾಡುವ ಹಾಗೂ ಅಭಿವೃದ್ಧಿ ಪಡಿಸುವ ಯಾಂತ್ರೀಕೃತ ನೂತನ ರಾಷ್ಟ್ರೀಯ ಶಿಕ್ಷಣ ನೀತಿ ಹೊಂದಿದೆ.

**ಜೀವನ ಶಿಕ್ಷಣ :–** ನಮ್ಮ ದೇಶ ಬಹು ಸಂಸ್ಕೃತಿ ಸಮಾಜ. ಆದರಿಂದ ಮೌಲ್ಯಗಳೆಲ್ಲವೂ ಸಂದಿಗ್ಧತೆ ಹಾಗೂ-ಕವಲುದಾರಿಯ ಮೇಲೆ ನೆಲೆಯೂರಿವೆ. ವೈವಿಧ್ಯ ಸಂಸ್ಕೃತಿಯ ನಡುವೆ ಬಿರುಕು ಉಂಟಾಗಿದೆ. ದೇಶ ಸಂಸ್ಕೃತಿಯ ಇತಿಹಾಸ ನಮ್ಮಿಂದ ದೂರಸರಿ

ಯುತ್ತಿದೆ. ಸಂಸ್ಕೃತಿಯಲ್ಲಿ ಹೀನತೆ, ಅಮಾನವೀಯತೆ ಹಾಗೂ ಪ್ರತ್ಯೇಕತೆ ಇದರಿಂದ ತಲೆದೋರುತ್ತಿವೆ. ಪೂರ್ವಕಲ್ಪಿತ ಅಭಿಪ್ರಾಯಗಳು ಪರಸ್ಪರರ ಬಗ್ಗೆ ಅಸೂಯಾಪರ ಭಾವನೆಗಳನ್ನು ಬೆಳೆಸುತ್ತಿವೆ. ಜನಸಂಖ್ಯಾ ಹೆಚ್ಚಳ ಸಾಮಾಜಿಕ ಅಸಮಾನತೆ ಸೃಷ್ಟಿಸಿದೆ. ಪರಿಸರ ಶೋಷಣೆಯಿಂದ ಅಸಮತೋಲ ಮಲಿನತೆ ಉಂಟಾಗುತ್ತಿದೆ. ನಮ್ಮ ಜೀವನಮಟ್ಟದ ಮೇಲೆ ಅತಿ ಭಯಾನಕ ಪರಿಣಾಮ ಬೀರುತ್ತಿದೆ. ಅಣು ಶಕ್ತಿಯ ಭೀತಿಯಿಂದ ವಿಶ್ವ ತತ್ತರಿಸುತ್ತಿದೆ. ಇದರಿಂದ ಮಾನವನ ಮನೋಭಾವನೆ ಯಲ್ಲಿ ರಚನಾತ್ಮಕ ಬದಲಾವಣೆಗಳಾಗಬೇಕಿವೆ. ಪರಂಪರೆಯಿಂದ ಗೌರವಿಸಲ್ಪಟ್ಟ ಮೌಲ್ಯಗಳನ್ನು ರಚನಾತ್ಮಕವಾಗಿ ಪೋಣಿಸಲ್ಪಡಬೇಕಾಗಿದೆ. ಮೌಲ್ಯಾಧಾರಿತ ಶಿಕ್ಷಣ ಇದನ್ನು ಸಾಧಿಸಲು ಹೊರಟಿದೆ.

ಶಿಕ್ಷಣದ ಗುರಿ ಕೇವಲ ಜ್ಞಾನಾರ್ಜನೆಗೆ ಸೀಮಿತವಾಗಿದ್ದು, ಪರೀಕ್ಷೆಯಲ್ಲಿ ಉತ್ತೀರ್ಣವಾಗುವುದೊಂದೇ ಇರಬಾರದೆಂದು, ಹೊಸ ರಾಷ್ಟ್ರೀಯ ನೀತಿಯಲ್ಲಿ ವ್ಯಕ್ತಿತ್ವ ವಿಕಾಸ ಹಾಗೂ ಸಮಾಜ ಹೊಂದಾಣಿಕೆಗಾಗಿ ಮೌಲ್ಯಗಳನ್ನು ಕೇಂದ್ರೀಕರಿಸಲಾಗಿದೆ.

ಮೌಲ್ಯಾಧಾರಿತ ಶಿಕ್ಷಣವೊಂದು ಪಠ್ಯಪುಸ್ತಕವಾಗಿ ಬೋಧಿಸಲ್ಪಡಬೇಕೆಂಬ ನಿಲುವನ್ನು ಹೊಸ ಶಿಕ್ಷಣ ನೀತಿ ಹೊಂದಿರುವುದಿಲ್ಲ. ಮೌಲ್ಯಾಧಾರಿತ ಶಿಕ್ಷಣ ಏಕ ವಿಷಯ ಬೋಧನೆಯಲ್ಲ. ಸಕಲ ವಿಷಯಗಳಲ್ಲಿ ಮೌಲ್ಯಗಳಿವೆ. ವಿಜ್ಞಾನ, ಸಮಾಜ ಪರಿಚಯ, ಗಣಿತ, ಭಾಷೆ ಶಾರೀರಿಕ ಶಿಕ್ಷಣ ಕಲಾಶಿಕ್ಷಣ ಇತ್ಯಾದಿ, ಬೋಧಿಸಲ್ಪಡುವ ವಿಷಯಗಳಲ್ಲಿ ಮೌಲ್ಯಗಳು ಅಡಕವಾಗಿವೆ. ಇದೊಂದು ಪ್ರತ್ಯೇಕ ಕಲಿಸುವ ವಿಷಯ ವೆಂದು ಕಲಿಸುವ ಭಾರವು ಹೆಚ್ಚೆಂದು ಶಿಕ್ಷಕನಲ್ಲಿ ಅನಿಸಿಕೆ ಇರುವುದು ಸಲ್ಲದ ವಿಷ ಯವೇ ಆಗಿದೆ. ವಿಷಯದಲ್ಲಿರುವ ಮೌಲ್ಯಗಳನ್ನು ಅರಸಿ ಅದನ್ನು ಬೋಧಿಸುವ ಅನ್ವೇಷಣಾ ಮನೋಭಾವ ನೂತನ ಶಿಕ್ಷಣ ನೀತಿಯಡಿಯಲ್ಲಿ ಶಿಕ್ಷಕನು ಬೆಳೆಸಿಕೊಳ್ಳ ಬೇಕಾಗಿದೆ. ಪ್ರಚಾರ, ಉಪದೇಶ, ಶಿಕ್ಷಾ ಮಾರ್ಗದಿಂದ ಮೌಲ್ಯಗಳನ್ನು ಇದುವರೆಗೆ ಬೋಧಿಸುತ್ತಿರುವ ಶಿಕ್ಷಕ ಇದನ್ನು ಕೈಬಿಡಬೇಕಾಗಿದೆ. ಮೌಲ್ಯಾಧಾರಿತ ಶಿಕ್ಷಣವೆಂದರೆ ಜೀವನಕ್ಕಾಗಿರುವ ಶಿಕ್ಷಣ ಮೌಲ್ಯಗಳ ಅರಿವು ಮಗುವಿನಲ್ಲಿ ಉಂಟಾಗುವಂತೆ ಮಾಡಿ ಕಾಯಾ ವಾಚಾ ಮನಸಾ ತ್ರಿಕರಣ ಪೂರ್ವಕವಾಗಿ ಅವುಗಳನ್ನು ತನ್ನದಾಗಿ ಮಾಡಿ ಕೊಳ್ಳುವಂತೆ, ಶಿಕ್ಷಕನು ನೋಡಬೇಕಾಗಿದೆ. ಕೊನೆಗೆ ಎಲ್ಲ ಮೌಲ್ಯಗಳ ಧ್ಯೇಯೋ ದ್ದೇಶ ವೈಜ್ಞಾನಿಕ ಮನೋಭಾವನೆಗಳನ್ನು ಬೆಳೆಸುವುದೇ ಆಗಿದೆ.

**ಒಡಮೂಡಬೇಕಾದ ಮೌಲ್ಯ**

ಒಂಟಿ ಜೀವನ ಅಪೇಕ್ಷಿಸದ ಮಾನವ ಸಚೇತನ ಜೀವಿ. ಸಮಾಜ, ವಿಶ್ವ, ರಾಷ್ಟ್ರ ದೊಂದಿಗೆ ತನ್ನ ವ್ಯಕ್ತಿತ್ವ ಬೆಸೆದುಕೊಂಡಿರುವ ಮಾನವನೆಂಬ ವಿಷಯವನ್ನು ಗಮನ



ದಲ್ಲಿಟ್ಟುಕೊಂಡು ಶಿಕ್ಷಣ ಕಲಿಯುವ ವಿದ್ಯಾರ್ಥಿಗಳಲ್ಲಿ ಮೌಲ್ಯಗಳನ್ನು ಒಡಮೂಡಿಸ ಬೇಕಾಗಿದೆ. ಮೌಲ್ಯಗಳು ಕೇವಲ ವ್ಯಕ್ತಿಗತ ಮಾತ್ರವಲ್ಲ. ಅವು ವಿಶ್ವ ಬಾಂಧವ್ಯ ಮೌಲ್ಯಗಳನ್ನು ವಿದ್ಯಾರ್ಥಿಯಲ್ಲಿ ಪಡಿಮೂಡಿಸಬೇಕಾಗಿದೆ. ರಾಷ್ಟ್ರೀಯ ಮೌಲ್ಯಗಳೂ ಇದರೊಂದಿಗೆ ಜೊತೆಗೂಡಿ ಬರಬೇಕಾಗಿದೆ. ಸ್ವಾತಂತ್ರ್ಯ ಸಮಾನತೆ, ಭ್ರಾತೃತ್ವ ಪ್ರಜಾ ಪ್ರಭುತ್ವ, ಸಮಾಜವಾದ ಜಾತ್ಯಾತೀತತೆಗಳಂತಹ ಸಾರ್ವತ್ರಿಕ ಮೌಲ್ಯಗಳನ್ನು ನೂತನ ರಾಷ್ಟ್ರೀಯ ಪಠ್ಯಕ್ರಮದ ಚೌಕಟ್ಟಿನಲ್ಲಿ ಈ ಉದ್ದೇಶ ಈಡೇರಿಸಲು ಸೇರ್ಪ ಡೆಯಾಗಿವೆ. ಶಿಕ್ಷಣ ಮುಖೇನ ಯಾವ ಮೌಲ್ಯಗಳನ್ನಾದರೂ ಬೆಳೆಸಬಹುದೆಂಬ ತಿರುಳು ನಮ್ಮ ರಾಷ್ಟ್ರೀಯ ಶಿಕ್ಷಣನೀತಿ ಹೊಂದಿದೆ ಭಾರತೀಯನೆಂದು ಅಭಿಮಾನ ಮೂಡಿಸುವುದು. ಈ ಶಿಕ್ಷಣ ನೀತಿಯು ಒತ್ತು ನೀಡಿರುವ ಮೌಲ್ಯವು ಒಂದಾಗಿದೆ. ಸಾಮಾನ್ಯ ಸಂಸ್ಕೃತಿಯ ಪರಂಪರೆ ಸಮಾನತಾ ಪ್ರತಿಪಾದನೆ ಪರಿಸರ ಸಂರಕ್ಷಣೆ ಮಿತಕುಟುಂಬ ತತ್ವಪಾಲನೆ, ಅಂತರಾಷ್ಟ್ರೀಯ ಸಹಕಾರ ಶಾಂತಿಯುತ ಸಹಬಾಳ್ವೆ ಹಾಗೂ ರಾಷ್ಟ್ರೀಯ ಭಾವೈಕತೆ ಮೌಲ್ಯಗಳನ್ನು ಸೃಷ್ಟಿಸಲು, ಹೊಸ ಪಠ್ಯಕ್ರಮ ಪೂರಕವಾಗಿದೆ.

ಮೌಲ್ಯ ಶಿಕ್ಷಣ ಸಮಯ ಮಿತಿಯುಳ್ಳ ವಿಧಾನವಲ್ಲ. ಜೀವನ ಪರ್ಯಂತ ನಡೆಯುವ ಸಂಶೋಧನೆ. ಇವುಗಳನ್ನು ಬೆಳೆಸುವುದು ತಿಳಿದಷ್ಟು ಸುಲಭ ವಿಷಯವಲ್ಲ. ಮನಸ್ಸಿಗೆ ನಾಟುವಂತೆ ಬೋಧಿಸುವುದು ಕಷ್ಟಕರ. ಜೀವನ ಅತ್ಯುಚ್ಚ ಆದರ್ಶ ಕಲ್ಪನೆ ಗನುಗುಣವಾಗಿ, ಸೂಕ್ತವಾದ ಮೌಲ್ಯಗಳನ್ನಾರಿಸಿ ಬೋಧಿಸುವುದು ಶಿಕ್ಷಕನ ಆದ್ಯ ಕರ್ತವ್ಯ. ಸಂದಿಗ್ಧ ಸಮಯದಲ್ಲಿ ಸಂಭವಿಸಬಹುದಾದ ದುರಂತಗಳನ್ನು ಮೌಲ್ಯಾ ಧಾರಿತ ಶಿಕ್ಷಣ ನಿವಾರಿಸುವುದು.

ಶಾಲಾ ಪಠ್ಯಕ್ರಮವು ಮೌಲ್ಯಗಳ ಆಗರ. ಬೋಧಿಸಲ್ಪಡುವ ಪ್ರತಿ ವಿಷಯದ ವಸ್ತು ರಚನೆ ಹಾಗೂ ಬೋಧನಾ ವಿಧ್ಯಾನಗಳಲ್ಲಿಯೂ ಮೌಲ್ಯಗಳು ಶೇಖರ ಗೊಂಡಿವೆ. ಸ್ವತಂತ್ರ ಅನ್ವೇಷಣೆ ತಾರ್ಕಿಕ ಅಲೋಚನೆ ಸಾಹಿತ್ಯ, ಇತಿಹಾಸಗಳು ಮೌಲ್ಯದ ಆಕರಗಳಾಗಿವೆ. ಬೋಧನೆಯೆಂದರೆ ಕೇವಲ ವಸ್ತು ವಿಷಯ ನಿರೂಪಣೆ ಯಷ್ಟೇ ಅಲ್ಲ. ಇದು ಮನಸ್ಸು ಹೃದಯ ಮಾರ್ಪಾಡಾಗಿ ವಿದ್ಯಾರ್ಥಿಯ ವರ್ತನೆಯಲ್ಲಿ ವಿಶೇಷ ಬದಲಾವಣೆಯನ್ನು ತರುವುದೇ ಆಗಿದೆ.

ಪಠ್ಯೇತರ ಚಟುವಟಿಕೆಗಳಾದ ಸ್ವ-ಆಡಳಿತ ಪದ್ಧತಿ, ಶಾಲಾ ಸಂಘಗಳು ಎನ್.ಸಿ.ಸಿ. ಸ್ಕೌಟ್‌ದಳ ರೆಡ್‌ಕ್ರಾಸ್, ಪ್ರವಾಸ, ಆಟಪಾಠ ಹಾಗೂ ಕ್ರೀಡೆಗಳು ಬಾಲಕ ಬಾಲಕಿಯರನ್ನು ಪರಸ್ಪರ ಕಲೆತು ಹಾಕಿ ಹೊಣೆಗಾರಿಕೆ, ಹಾಗೂ ಸಹಕಾರ ಮನೋಭಾವನೆಯನ್ನು ಮೂಡಿಸುತ್ತದೆ. ಈ ಚಟುವಟಿಕೆಗಳು ಮೌಲ್ಯಗಳ ಕಲಿ

ಕೆಗಾಗಿ ವಾಸ್ತವಿಕ ಜೀವನ ಸನ್ನಿವೇಶ ಹಾಗೂ ಅನುಭವಗಳನ್ನು ಒದಗಿಸುತ್ತ ಶಾಲಾ ಪರಿಸರವೇ ಮೌಲ್ಯಗಳನ್ನು ಹರಡುತ್ತವೆ. ಶಿಕ್ಷಕರ ಆದರ್ಶತ್ವ ಮೌಲ್ಯ ಪ್ರಸಾರಕ್ಕೆ ಚಾಲಕ ಶಕ್ತಿ ಇದ್ದಂತೆ. ಮೌಲ್ಯಗಳನ್ನು ಪ್ರತ್ಯೇಕವಾಗಿ ಇಲ್ಲವೇ ಪ್ರಾಸಂಗಿಕವಾಗಿಯು ಕಲಿಸಬಹದು. ಶಾಲಾ ವೇಳಾಪತ್ರಿಕೆಯಲ್ಲಿ ಇದಕ್ಕಾಗಿ ನಿಗದಿತ ವೇಳೆಯನ್ನು ಮೀಸಲಾಗಿರಿಸಬಹುದು. ಕಥೆ ನಿದರ್ಶನ ಕಟ್ಟುಕಥೆ ವಾಸ್ತವಿಕ ಜೀವನದ ಆಯ್ದ ಘಟನೆಗಳನ್ನು ಹೇಳಿ ಮೌಲ್ಯಗಳ ಬಗ್ಗೆ ಅರಿವನ್ನುಂಟು ಮಾಡಬಹುದು.

**ಮೌಲ್ಯಗಳ ಶಿಲ್ಪಿ :-** ಮೌಲ್ಯಗಳ ಬಗ್ಗೆ ಶ್ರದ್ಧೆ ಗೌರವ ತಾಳಿ ಅವುಗಳನ್ನು ವಿದ್ಯಾರ್ಥಿ ತನ್ನದನ್ನಾಗಿರಿಸಿ ಕೊಳ್ಳುವಲ್ಲಿ ಶಿಕ್ಷಕನ ಪಾತ್ರ ಅಪಾರವಾದುದು. ಶಿಕ್ಷಕರಾದವರು ತಮ್ಮ ವೃತ್ತಿನೀತಿ ಸಂಹಿತೆಯಲ್ಲಿರುವ ಮೌಲ್ಯಗಳನ್ನು ಒಡಮೂಡಿಸಿಕೊಳ್ಳುವ ಅಗತ್ಯವಿದೆ. ಅದಕ್ಕೆ ಅನುಗುಣವಾಗಿ ತಮ್ಮ ನಡತೆ ಆಚಾರ ವಿಚಾರಗಳನ್ನು ಅವರು ತಿದ್ದಿಕೊಳ್ಳಬೇಕು. ಇದರಿಂದ ಶಾಲಾ ಪರಿಸರವು ಜೇಷ್ಠ ಮೌಲ್ಯಗಳ ಬೆಳವಣಿಗೆಗೆ ಪೂರಕವಾಗುವುದು ಶಾಲೆಯಲ್ಲಿ ಸ್ನೇಹಪೂರ್ಣ ಹಾಗೂ ಭದ್ರತೆಯ ವಾತಾವರಣವನ್ನು ಸೃಷ್ಟಿಸುವುದರಿಂದ ಮಕ್ಕಳು ಸುಳ್ಳು ಹೇಳುವ ಹಾಗೂ ಕಲಹಪ್ರಿಯತೆಯ ವರ್ತನೆಯು ಮಾಯವಾಗುವದು. ಉಪದೇಶ ಹಾಗೂ ಎಚ್ಚರಿಕೆಗಳನ್ನು ನೀಡುವುದನ್ನು ಕೈಬಿಟ್ಟು ಮಗುವನ್ನು ಅರ್ಥಮಾಡಿಕೊಂಡು ಬೋಧನಾ ಪದ್ಧತಿಯನ್ನು ವಿನಾಶಗೊಳಿಸಬೇಕು. ಮಕ್ಕಳ ಪ್ರತ್ಯಕ್ಷ ಅನುಭವದ ಮೂಲಕ ಕಲಿಕೆ ಇರಲಿ, ಯಾವ ವಿಷಯವನ್ನೇ ಬೋಧಿಸುತ್ತಿರಲಿ, ತಾನು ಮೌಲ್ಯಬೋಧನೆಯ ಸಾಧನವೆನ್ನುವ ಅರಿವು ಶಿಕ್ಷಕರಲ್ಲಿ ಸತತವಾಗಿ ಇರಬೇಕಾಗುತ್ತದೆ.

ಹೊಸ ಶಿಕ್ಷಣನೀತಿ ಅನುಷ್ಠಾನಕ್ಕೆ ಬರುವ ಪೂರ್ವದಲ್ಲಿಯೇ ಮೌಲ್ಯಾಧಾರಿತ ಬೋಧನೆಯನ್ನು ಮಾಡುವುದರಲ್ಲಿ ಹೊನ್ನಾವರದ ಸೇಂಟ್ ಥಾಮಸ್ ಹೈಸ್ಕೂಲಿನ ಶಿಕ್ಷಕರಾದ ಶ್ರೀ ಪಿ. ವಿ. ಹಾಸ್ಯಗಾರರು ಪಳಗಿದ ನಾಲಿಗೆ ಉಳ್ಳವರೆನ್ನುವುದು ಸರ್ವವಿದಿತ. ಇದಕ್ಕಾಗಿ ಮಾಧ್ಯಮಿಕ ಶಾಲಾ ಶಿಕ್ಷಕರಿಗಾಗಿ ಗುಂಡಬಾಳೆಯ ಆರೋಗ್ಯ ಮಾತಾ ಹೈಸ್ಕೂಲಿನಲ್ಲಿ ಅವರು ನೀಡಿರುವ ಪ್ರಾತ್ಯಕ್ಷಿಕ ಪಾಠ ಮಿನುಗು ನಿದರ್ಶನವೇ ಆಗಿದೆ. ಇವರು ಅನುಸರಿಸುವ ಬೋಧನಾಕ್ರಮ ಮೌಲ್ಯಾಧಾರಿತವೂ ಹಾಗೂ ಅನುಕರಣೀಯವೂ ಆಗಿದೆ.



# ಪ್ರಾಚೀನ ಕರ್ನಾಟಕದ ಶಿಕ್ಷಕರ ಸ್ಥಿತಿಗತಿ

ಪ. ರಾಮಕೃಷ್ಣ ಶಾಸ್ತ್ರಿ, ಶಿವಶಕ್ತಿ ನಿಲಯ, ಅಂಚೆ ಮಂಚಿನ್ನ-574 295 (ದ. ಕನ್ನಡ)

ಹದಿನಾಲ್ಕನೆಯ ಶತಮಾನದಲ್ಲಿ ವಿದೇಶಿ ಪ್ರವಾಸಿ ಇಬನ್ ಬತೂತಾ ಭಾರತಕ್ಕೆ ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರದಲ್ಲಿ ಹುಡುಗ, ಹುಡುಗಿಯರಿಗೆ ಪ್ರತ್ಯೇಕವಾಗಿ ಒಟ್ಟು ೨೬ ಪ್ರಾಥಮಿಕ ಶಾಲೆಗಳಿರುವುದನ್ನೂ ಪ್ರತಿಯೊಬ್ಬ ಮುಸಲ್ಮಾನಿ ಮಹಿಳೆಯರಿಗೂ ಕುರಾನ್ ಬಾಯಿಪಾಠವಾಗಿರುವುದನ್ನು ಕಂಡನಂತೆ ದಕ್ಷಿಣ ಕನ್ನಡ ಜಿಲ್ಲೆಯ ಒಂದು ಹಳ್ಳಿಯಲ್ಲಿ ಮಳಲ ರಾಶಿಯ ಮೇಲೆ ಮಕ್ಕಳು ಅಕ್ಷರ ತೀಡುವುದನ್ನೂ ಒಬ್ಬ ಬಾಲಕ ಹೇಳಿದ ಮಗ್ಗಿಯನ್ನು ಉಳಿದವರೆಲ್ಲರೂ ಗಟ್ಟಿಯಾಗಿ ಉಚ್ಚರಿಸುವುದನ್ನು ಇಟಲಿಯನ್ ಪ್ರವಾಸಿ ಪಿಟ್ರೊಂ ಡೆಲ್ಲಾಫಾಲ್ಲೆ ಸುಂದರವೂ ಸುಭದ್ರವೂ ಆದ ಶಿಕ್ಷಣ ಪದ್ಧತಿ ಎಂದು ಕಂಡು ಆಚ್ಚರ್ಯಪಟ್ಟು ವರ್ಣಿಸಿದ್ದಾನೆ. ಪ್ರಾಚೀನ ಕಾಲದಲ್ಲಿ ಪ್ರಾಥಮಿಕ ಶಿಕ್ಷಣ ಕನ್ನಡದಲ್ಲೇ ನಡೆಯುತ್ತಿತ್ತೆಂಬುದು ಶಿಲಾಶಾಸನಗಳ ಮೂಲಕವೂ ಗ್ರಂಥಾಧಾರಗಳಿಂದಲೂ ತಿಳಿಯುತ್ತದೆ. ಕನ್ನಡ ಶಿಕ್ಷಣಕ್ಕೆ ಬಾಲ್ಯ ಶಿಕ್ಷೆಯೆಂದೂ ಅದನ್ನು ಕಲಿಸುವ ಶಿಕ್ಷಕರಿಗೆ ಕರ್ಣಾಟ ಪಂಡಿತರೆಂದು ಅಭಿದಾನವಿತ್ತು. ಅಂತಹ ಶಿಕ್ಷಕರನ್ನು ಉಪಾಧ್ಯಾಯರೆಂದೂ ಅಕ್ಷರಾಭ್ಯಾಸ ಮಾಡುವರಾದ್ದರಿಂದ ಅಕ್ಕರಿಗರೆಂದೂ ಕರೆಯುವ ಪದ್ಧತಿ ಇತ್ತು. ಇವರಿಗೆ ಉಂಬಳಯಾಗಿ ಭೂಮಿಯನ್ನು ಕೊಟ್ಟು ಉತ್ತಮ ಮಟ್ಟದ ಜೀವನ ನಡೆಸಲು ಅಗತ್ಯವಾದಷ್ಟು ಹಣವನ್ನು ಕೊಡುತ್ತಿದ್ದರು.

ಕನ್ನಡ ಕಲಿಸುವ ಶಿಕ್ಷಕರಿಗೆ ಪ್ರತೀ ೨೦ ಹುಡುಗರಿಗೆ ತಿಂಗಳಿಗೊಂದರಂತೆ ಚಿನ್ನದ ಗದ್ಯಾಣ ನಾಣ್ಯಗಳನ್ನೂ ಈ ಮಕ್ಕಳಿಗೆ ಅಡಿಗೆ ಮಾಡಿ ಬಡಿಸುವಾತನಿಗೆ ವರ್ಷಕ್ಕೆ ೩ ನಾಣ್ಯಗಳನ್ನು ಸಂಬಳವಾಗಿ ಕೊಡುತ್ತಿದ್ದರು. ಕೆಲವೆಡೆ ಊರ ದೇವಾಲಯದಲ್ಲಿ ಇಂತಹ ಶಾಲೆಗಳು ನಡೆಯುತ್ತಿದ್ದವು. ಅಲ್ಲಿ ಪುರಾಣ ವಾಚನ ಮಾಡುವವರು ದಿನದಲ್ಲಿ ಒಂದೂವರೆ ತಾಸು ಕಾಲ ಪುರಾಣ ಓದಿದ ಬಳಿಕ ಶಿಕ್ಷಕರ ಕೆಲಸ ಮಾಡುತ್ತಿದ್ದರು ಆದಕ್ಕಾಗಿ ಅವರಿಗೆ ಭೂಮಿದಾನ ಮಾಡಲಾಗಿತ್ತು. ಕೆಲವೆಡೆ ಕನ್ನಡ ಕಲಿಸುವ ಅಧ್ಯಾಪಕರಿಗೆ ಒಂದು ನಾಣ್ಯವೂ ವೇದಶಾಸ್ತ್ರದಿ ಸಂಸ್ಕೃತ ಅಭ್ಯಾಸ ಮಾಡಿಸುವವರಿಗೆ ವರ್ಷಕ್ಕೆ ೬ ನಾಣ್ಯಗಳೂ ಸಲ್ಲುತ್ತಿದ್ದವು.

ಕರ್ನಾಟಕ ಹತ್ತನೆಯ ಶತಮಾನದವರೆಗೆ ಉನ್ನತ ಶಿಕ್ಷಣವನ್ನು ಕೊಡುವ ವಿದ್ಯಾಕೇಂದ್ರಗಳು ಪ್ರಾಯಶಃ ಇರಲಿಲ್ಲವಾದರೂ ಅನಂತರ ಅದಕ್ಕಾಗಿಯೇ ಅಗ್ರಹಾರ, ಘಟಕ, ಬ್ರಹ್ಮಪುರಿ ಮತ್ತು ಮಠಗಳೆಂಬ ನಾಲ್ಕು ವಿಧದ ವಿದ್ಯಾಲಯಗಳು ಎಲ್ಲಾ ಕಡೆಯೂ ತಲೆಯೆತ್ತತೊಡಗಿದವು. ಘಟಿಕಗಳಲ್ಲಿ ವೇದ, ಶಾಸ್ತ್ರಗಳನ್ನು ಕಲಿಸುವ

ಅಧ್ಯಾಪಕರಿದ್ದರು. ಪ್ರತ್ಯೇಕವಾದ ವಾಚನಾಲಯಗಳೂ ಅವನ್ನು ನೋಡಿಕೊಳ್ಳಲು ವಿದ್ವಾಂಸರೂ ಇದ್ದರು. ಇವರಿಗೆ ಮೇಲ್ವಿಚಾರಕನಾದವನಿಗೆ ಘುಳಿಯಾರ ಎಂಬ ಅಭಿದಾನವೂ ಇತ್ತು.

ಹಿಂದಿನ ರಾಜರು ದೇವಾಲಯಗಳಲ್ಲಿ ಭದ್ರವಾದ ಕಟ್ಟಡಗಳನ್ನು ನಿರ್ಮಿಸಿ ಶಾಲೆಗಳನ್ನು ನಡೆಸುತ್ತಿದ್ದರು. ವಿದ್ಯಾರ್ಥಿಗಳಾಗಿ ಬೇರೆ ದೇಶಗಳಿಂದ ಬರುವ ಹುಡುಗರಿಗಾಗಿ ವಸತಿಗೃಹಗಳನ್ನು ನಿರ್ಮಿಸಿ ಉಚಿತವಾಗಿ ಅವರಿಗೆ ಊಟ ನೀಡಲು ಸಾವಿರಾರು ಎಕರೆ ಹೊಲಗಳನ್ನು ದತ್ತಿಯಾಗಿ ನೀಡಿದ್ದರು. ರಾತ್ರಿ ಅವರು ಉರಿಸುವ ದೀಪದ ತೈಲಕ್ಕೆ ಎಣ್ಣೆ ಕಾಳುಗಳನ್ನು ಬೆಳೆಯಲು ತಲಾ ೨೦೦ ಎಕರೆ ಹೊಲಗಳನ್ನು ಕೊಡಲಾಗಿತ್ತು. ಊರಿನ ಛತ್ರದಲ್ಲಿ ಮದುವೆಯಾದರೆ ೬ ಹಣವನ್ನು ಉಳಿದವರಾದರೆ ಎರಡೂವರೆ ಹಣವನ್ನು ಕೆಳಜಾತಿಯವರಲ್ಲಿ ಒಂದು ಹಣವನ್ನೂ ತಂದು ಈ ಪಾಠಶಾಲೆಗಳಿಗೆ ವಂತಿಗೆಯಾಗಿ ಕೊಡಬೇಕೆಂಬ ನಿಯಮವಿತ್ತು. ಅನ್ನ ದಾನ ನಡೆಯುವಾಗ ಶ್ಯಕ್ತ್ಯನುಸಾರ ಶಿಕ್ಷಕರನ್ನು ವಿದ್ಯಾರ್ಥಿಗಳನ್ನು ಕರೆಸಿ ಊಟ ಹಾಕುತ್ತಿದ್ದರು. ಈ ಪದ್ಧತಿ ಎಲ್ಲಾ ಕಡೆ ಇರಲಿಲ್ಲವಾದರೂ ಪಾಠಶಾಲೆಗಳಿಗೆ ಇಂತಹ ಗೌರವ ಸಲ್ಲುತ್ತಿತ್ತು.

ಹೊಯಿಸಳ ರಾಜರ ಕಾಲದಲ್ಲಿ ವೇದಶಾಸ್ತ್ರಗಳನ್ನು ಕಲಿಸುವ ಅಗ್ರಹಾರಗಳು ಅನೇಕ ವಿದ್ದವು. ಕೇವಲ ಬ್ರಾಹ್ಮಣರ ಮಕ್ಕಳಿಗೆ ಮೀಸಲಾದ ಬ್ರಹ್ಮಪುರಿ ಎಂಬ ವಿದ್ಯಾಲಯಗಳು ನಗರಗಳಲ್ಲಿದ್ದವು. ವಿದ್ಯಾರ್ಥಿನಿಲಯದ ಅನ್ವರ್ಥ ಹೆಸರು ಪಡೆದ ಮಠಗಳೇ ಮುಂದೆ ವಿದ್ಯಾನಿಲಯಗಳೆಂಬ ಖ್ಯಾತಿ ಪಡೆದವು. ಯೋಗ್ಯರಾದ ಪಂಡಿತರಿಂದ ಇಂತಹ ಮಠಗಳಲ್ಲಿ ಶಿಕ್ಷಣ ಕೊಡಿಸುವ ಹೊಣೆಗಾರಿಕೆಯನ್ನು ದೇವಾಲಯಗಳು ಹೊತ್ತಿದ್ದವು. ಶಿಕ್ಷಕರಿಗೆ ದತ್ತಿಯಾಗಿ ನೀಡಿದ ಭೂಮಿಯಿಂದ ಬರುವ ಉತ್ಪನ್ನದಲ್ಲಿ ಸ್ವಲ್ಪ ಭಾಗವನ್ನು ನಿಶ್ಚಿತ ಸಂಖ್ಯೆಯ ವಿದ್ಯಾರ್ಥಿಗಳ ಅನ್ನ ವಸ್ತ್ರಗಳಿಗಾಗಿ ಬಳಸುವ ಪದ್ಧತಿ ಕೆಲವಡೆ ಇತ್ತು. ವೇದ, ವೇದಾಂತ, ಕಾವ್ಯ, ನಾಟಕ, ಸಂಗೀತ ಇತ್ಯಾದಿ ಸಕಲವನ್ನು ವಿದ್ಯಾರ್ಥಿಗಳಿಗೆ ಕಲಿಸಿ, ಖಾಯಿಲೆ ಬಂದಾಗ ವೈದ್ಯಕೀಯ ಉಪಚಾರವನ್ನು ಒದಗಿಸುವ ಮಠಗಳು ಕರ್ನಾಟಕದಲ್ಲಿ ಒಂದೆರಡಿದ್ದವು. ಅಲ್ಲದೆ ವೇದವನ್ನೋ ಮೀಮಾಂಸೆಯನ್ನೋ ಯಾವುದಾದರೂ ಒಂದೇ ವಿಷಯವನ್ನು ಕಲಿಸುವ ಶಾಲೆಗಳೂ ಇದ್ದವು.

ವಿದ್ಯಾರ್ಥಿಗಳಿಗೆ ದೀಪ, ಔಷಧ, ಕ್ಷೌರ, ಊಟ, ವಸತಿ, ಸ್ನಾನ ಎಲ್ಲಾ ವ್ಯವಸ್ಥೆಯನ್ನು ಉಚಿತವಾಗಿ ಕೊಟ್ಟು ವೇದ, ಪುರಾಣ, ವ್ಯಾಕರಣ ಕಾವ್ಯಗಳನ್ನೆಲ್ಲ ಅಭ್ಯಾಸ ಮಾಡಿಸುತ್ತಿದ್ದರು. ಸ್ನಾತಕ, ನೈಷ್ಠಿಕ, ಬ್ರಹ್ಮಚಾರಿ, ಮಾಣಿ ಎಂದು ವಿದ್ಯಾರ್ಥಿಗಳನ್ನು ವಿಂಗಡಿಸಿದ್ದರು. ಸನ್ಯಾಸಿಗಳಿಗೂ ಕಲಿಯುವ ಅವಕಾಶವಿತ್ತು.



ಅವರನ್ನು ಹಂಸ, ಪರಮಹಂಸ, ಏಕದಂಡಿ, ತ್ರಿದಂಡಿ ಎಂದು ವಿಭಾಗಿಸಿದ್ದರು ಶಿಕ್ಷಕರಿಗೆ ಆಚಾರ್ಯ, ಭಟ್ಟಾಚಾರ್ಯ, ಭಟ್ಟೋಪಾಧ್ಯಾಯ, ಭಟ್ಟ ಎಂದು ಕರೆಯುತ್ತಿದ್ದರು. ಗ್ರಂಥ ಭಂಡಾರಗಳಿಗೆ, ಶಿಕ್ಷಕರಿಗೆ, ಅಡಿಗೆಯವರಿಗೆ ಹಾಗೂ ಅವಕ್ಕೆ ಸಂಬಂಧಿಸಿದ ಎಲ್ಲರಿಗೆ ವಿದ್ಯಾಲಯದ ಬಳಿಯೇ ವಸತಿ ಗೃಹಗಳನ್ನು ಕಟ್ಟಿಸಿ ಕೊಡಲಾಗಿತ್ತು. ಕೆಲವು ವಿದ್ಯಾಸಂಸ್ಥೆಗಳಲ್ಲಿ ಬೌದ್ಧ ಮತ್ತು ಜೈನ ಶಾಸ್ತ್ರಾಭ್ಯಾಸಕ್ಕೂ ಅವಕಾಶವಿತ್ತು. ಮೈಸೂರು ಸಂಸ್ಥಾನದಲ್ಲಿ ಬ್ರಾಹ್ಮಣರಿಗೇ ಮೀಸಲಾದ ವಿದ್ಯಾಕೇಂದ್ರಗಳಿದ್ದರೂ ಬ್ರಾಹ್ಮಣೇತರ ಮಕ್ಕಳಿಗೂ ವಿದ್ಯಾದಾನ ಮಾಡುತ್ತಿದ್ದ ಉದಾಹರಣೆಗಳಿವೆ.

ಆದರೆ ಬ್ರಾಹ್ಮಣರು ಮತ್ತು ಕ್ಷತ್ರಿಯರು ಮಾತ್ರ ವಿದ್ಯಾದಾನ ಪಡೆದು ವೈಶ್ಯರು ವಾಣಿಜ್ಯ ರಂಗದಲ್ಲೂ ಶೂದ್ರರು ಕೃಷಿರಂಗದಲ್ಲೂ ಮುಂದುವರೆದವರೆಂದು ಹೇಳಲಾಗುತ್ತಿದೆ. ವೇದ ವಿದ್ಯೆಯನ್ನು ಬ್ರಾಹ್ಮಣರು ಪರರಿಗೆ ಕಲಿಸಲು ಹಿಂದೇಟು ಹಾಕಿದುದರಿಂದ ಆ ವಿದ್ಯೆ ಬ್ರಾಹ್ಮಣರ ಸೊತ್ತಾಗಿ ಉಳಿಯಿತು. ಇತರರು ಅಕ್ಷರ ವಿದ್ಯೆಯು ಯಾವ ಕೆಲಸಕ್ಕೂ ಅನಗತ್ಯವೆಂದು ಭಾವಿಸಿ ಅನಕ್ಷರತೆಯನ್ನು ತಾವಾಗಿ ತಂದುಕೊಂಡರು. ಮಧ್ಯಯುಗದ ಕರ್ನಾಟಕದಲ್ಲಿ ಶಿಕ್ಷಕರಿಗೆ ಪೂಜ್ಯಸ್ಥಾನವಿತ್ತು. ಶಿಕ್ಷಕರೇ ಪುರಾಣ ಪ್ರವಚಕರು ಆದುದರಿಂದ ಆ ಮೂಲಕ ಅವರು ಜ್ಞಾನವನ್ನು ಸಾಮಾನ್ಯ ಜನರಲ್ಲೂ ಬಿತ್ತುತ್ತಿದ್ದರು. ಹತ್ತನೆಯ ಶತಮಾನಕ್ಕಿಂತ ಮೊದಲು ಉಚ್ಚ ಶಿಕ್ಷಣಕ್ಕಾಗಿ ಕರ್ನಾಟಕದ ಜನರು ಬೇರೆ ರಾಜ್ಯಗಳಿಗೆ ಹೋಗಬೇಕಾಗಿತ್ತು.

---

## ವಚನ

ಮೃಗಾದಿಗಳಂತೆ ದಾನಾದಿಗಳ ಕೊಟ್ಟರೇನು ಕ್ಷತ್ರಿಯರಂತೆ ?
ಅದೆಂತೆಂದಡೆ ಶಿವನ ವಾಕ್ಯ : "ಪಯೋಹಾರೇ ತು ನಗ್ನೋ ಮುಗ್ಧಃ
ಪಿಶಾಚವತ್ ‖ ನಿತ್ಯ ಸ್ನಾಶ್ಚ ಶೀತಶ್ಚ ವಾಲ್ಮೀಕಿಸರ್ಪಜಾತಯಃ ‖
ತೃಣಂಭಕ್ಷ್ಯಂತಿ ಪಶವಃ ವನವಾಸೀ ಮೃಗಸ್ತಥಾ । ಯೇನ ಚೈತಾನಿ
ಕಾರ್ಯಾಣಿ ನ ಕರೋತಿಹಿ ಪಾರ್ವತಿ" ಎಂಬುದಾಗಿ, ಆವ ಸಿದ್ಧಿಗಳಿಂದಲೂ
ಫಲವಿಲ್ಲ; ಏನನೋದಿ ಏನ ಕೇಳಿ ಏನ ಹೇಳಿಯೂ ಫಲವಿಲ್ಲ- ಇವು ಭಕ್ತಿ
ಯೊಳಗಲ್ಲ. ಮುಕ್ತಿಗೆ ಸಲ್ಲವು. ಇದನರಿದು ಅವನಾನೊಬ್ಬನು ಲಿಂಗವರಿತು
ಲಿಂಗಾರ್ಚನೆಯಂ ಮಾಡಿ, ಗುರುಲಿಂಗಜಂಗಮಕ್ಕೆ ತನುಮನಧನವ
ಸವೆಸಿದಡೆ ಅದೇ ಚೆಲ್ವ ಭಕ್ತಿ, ಅದೇ ಚೆಲ್ವ ಮುಕ್ತಿ, ಅದೇ ಸರ್ವಸಿದ್ಧಿ,
ಅದೇ ಸರ್ವಕಾರಣವಯ್ಯಾ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

ಉರಿಲಿಂಗಪೆದ್ದಿ

# ಆ ತ್ಮ ವಿ ಮ ರ್ಶೆ

❁ ಶ್ರೀ ರಮೇಶ, ಉಪಾಧ್ಯಾಯರ, ಮನೋವಿಜ್ಞಾನಿಗಳು
ಕರ್ನಾಟಕ ಮಾನಸಿಕ ಆರೋಗ್ಯ ಸಂಸ್ಥೆ, ಧಾರವಾಡ.

ಕೆಲವರು ನಮ್ಮನ್ನು ಹೊಗಳುತ್ತಾರೆ, ಕೆಲವರು ತೆಗಳುತ್ತಾರೆ. ಎಲ್ಲರ ಕೈಯಲ್ಲೂ ಸೈ ಅನ್ನಿಸಿಕೊಳ್ಳುವುದು ತೀರ ದುಸ್ತರ. ಜನರು ತಮತಮಗೆ ಅನಿಸಿದಂತೆ ನಮ್ಮನ್ನು ತಿಳಿಯುತ್ತಾರೆ ಹಾಗೂ ಅಳೆಯುತ್ತಾರೆ. ಒಬ್ಬ ಎಲ್ಲರಿಗೂ ಒಳ್ಳೆಯವನಾಗಿರಲಾರ, ಹಾಗೆಯೇ ಕೆಟ್ಟವನೂ ಆಗಿರಲಾರ. ಇತರರು ನಮ್ಮನ್ನು ಹೊಗಳಿದಾಗ ಸಂತೋಷವಾಗುತ್ತದೆ, ತೆಗಳಿದಾಗ ನೊಂದುಕೊಳ್ಳುತ್ತೇವೆ. ಈ ಜನವೆ ಹೀಗೆ ಎಂದು ಮರುಗುತ್ತೇವೆ.

ಸಾಮಾಜಿಕ ಹೊಗಳಿಕೆಗಳಿಗೆ ಅಥವಾ ತೆಗಳಿಕೆಗಳಿಗೆ ನಾವು ಭಾವುಕರಾಗಿ ಸ್ಪಂದಿಸಿದರಷ್ಟೇ ಸಾಲದು. ಬಹುಶಃ ಸಾಮಾಜಿಕ ಹೇಳಿಕೆಗಳೆಂಬ ಕನ್ನಡಿಯಲ್ಲಿ ಪಡಿಮೂಡುವ ವೈವಿಧ್ಯಮಯವಾದ ಪ್ರತಿಬಿಂಬಗಳಲ್ಲಿ ನಮ್ಮ ನಿಜವಾದ ಬಿಂಬಗಳನ್ನು ಗುರುತಿಸಬೇಕು. ಉತ್ಪ್ರೇಕ್ಷಿತ ಹಾಗೂ ಕುತ್ಸಿತ ಬಿಂಬಗಳನ್ನು ಪ್ರತ್ಯೇಕಿಸಿ ಉಪೇಕ್ಷಿಸಬೇಕು. ವ್ಯಕ್ತಿತ್ವದ ಸಮತೋಲನಕ್ಕೆ ಹಾಗೂ ವಿಕಾಸಕ್ಕೆ ಇದು ಅಗತ್ಯ.

ಈ ಗುರುತಿಸುವಿಕೆ ಅಥವಾ "ನಾನು ಏನು" ಎಂಬ ಅರಿವನ್ನು ಹೊಂದುವದೇ ಆತ್ಮವಿಮರ್ಶೆ. ಕೆಲವೊಮ್ಮೆ ನಮ್ಮನ್ನು ಇತರರು ತೆಗಳಿದ ಸಂದರ್ಭಗಳಲ್ಲಿ ಅವರು ಭಾವಿಸಿದಷ್ಟು ನಾವು ಕೆಟ್ಟವರಾಗಿ ವರ್ತಿಸಿರಲಿಕ್ಕಿಲ್ಲ. ಬಹುಶಃ ಅದು ಅವರ ಮನಸ್ಥಿತಿಯ ಪರಿಣಾಮ.

ಹೀಗನಿಸುವುದು ಸಹಜ. ನಿಜವಾಗಿ ನಾವು ಇದ್ದ ಹಾಗೇ ನಮ್ಮನ್ನು ಅಳೆಯುವವರಿಲ್ಲ ಅನ್ನಿಸುವುದು ಸಾಮಾನ್ಯ.

ಆದ್ದರಿಂದಲೇ ನಾವು ಎಂಥವರೆಂದು ತಿಳಿದುಕೊಳ್ಳಬೇಕಾದರೆ ನಮ್ಮ ಒಳ್ಳೆಯ ಹಾಗೂ ಕೆಟ್ಟವರ್ತನೆಗಳೆಲ್ಲವನ್ನೂ ನಾವೆ ವಿಮರ್ಶಿಸಿ ನಿಜಕ್ಕೂ ನಾವು ಎಷ್ಟು ಒಳ್ಳೆಯವರು, ಯಾವಾಗ ಎಷ್ಟು ಕೆಟ್ಟವರು ಅದಕ್ಕೆ ಕಾರಣಗಳೇನು ಎಂದು ಸ್ವಯಂ ನಿರ್ಧಾರಕ್ಕೆ ಬರಬೇಕಾಗುತ್ತದೆ.

ಇದ್ದದ್ದನ್ನು ಇದ್ದ ಹಾಗೇ ಹೇಳಿದರೂ, ನಾವು ನಿಜಕ್ಕೂ ಹಾಗೆಯೇ ಇದ್ದರೂ ಹಾಗಲ್ಲ ಎಂದು ಮೊದ ಮೊದಲು ಮನಸ್ಸು ನಿರಾಕರಿಸುತ್ತದೆ.

ಒಳ್ಳೆಯ ಅಂಶವನ್ನು ಒಪ್ಪಿಕೊಂಡಷ್ಟು ಸುಲಭವಾಗಿ ನಮ್ಮ ಕೆಡಕುಗಳನ್ನು ನಾವು ಒಪ್ಪಿಕೊಳ್ಳಲು ಹಿಂಜರಿಯುತ್ತೇವೆ



ದೀರ್ಘಕಾಲದ ಪೂರ್ವಾಗ್ರಹಗಳಿಲ್ಲದ ಮುಕ್ತ ವಿವೇಚನೆಯಿಂದ ಮಾತ್ರ ನಿಷ್ಟುರವಾದ, ನಿರ್ಮಲವಾದ ಆತ್ಮ ವಿಮರ್ಶೆ ರೂಪುಗೊಳ್ಳುತ್ತವೆ,

ನಮಗೆ ಯಾರಾದರೂ ಏನಾದರೂ ಅಂದಾಗ, ಅಂದವರ ಭಾಗಗಳಲ್ಲಿ ನಾವಿದ್ದರೆ ಏನು ಅನ್ನುತ್ತಿದ್ದೆವು, ಏಕೆ ಅನ್ನುತ್ತಿದ್ದೆವು ಎಂದು ಯೋಚಿಸುವುದು ಮುಕ್ತ ವಿವೇಚನೆಗೆ ಸುಲಭವಾದ ವಿಧಾನ.

ಸ್ಪಷ್ಟವಾದ ಆತ್ಮ ವಿಮರ್ಶೆ ಆತ್ಮ ವಿಶ್ವಾಸವನ್ನು ಹೆಚ್ಚಿಸಬಲ್ಲದು. ಏಕೆಂದರೆ ನಮ್ಮ ಇತಿಮಿತಿಗಳನ್ನು, ನಮ್ಮ ಸಾಮರ್ಥ್ಯ ಹಾಗೂ ದುರ್ಬಲತೆಗಳನ್ನು ಆತ್ಮ ವಿಮರ್ಶೆ ತೆರೆದಿಡುತ್ತದೆ. ಆಗ ಏನನ್ನು ಸಾಧಿಸಬಹುದು ಎಂಬ ಅರಿವು ನಮ್ಮ ಅಳವಿಗನುಗುಣವಾಗಿ ಮೂಡುತ್ತದೆ. ಯಾರೋ ಏನೆಥೇ ಹೇಳಿದರೆಂದು ನಮ್ಮ ಸಾಮರ್ಥ್ಯಕ್ಕೆ ಮೀರಿದ್ದನ್ನು ಸಾಧಿಸಲು ಹೊರಟು ಎಡವುದೇ ಹುಚ್ಚು ಸಾಹಸ ಕಡಿಮೆಯಾಗತ್ತದೆ. ಒಟ್ಟನಲ್ಲಿ ಇದರಿಂದ ಸಾಧನೆಗಳ ಸಫಲತೆಯ ಪ್ರಮಾಣ ಹೆಚ್ಚಿ ನಮ್ಮ ಆತ್ಮವಿಶ್ವಾಸ ಪುಷ್ಟಿಗೊಳ್ಳುತ್ತದೆ.

ಸ್ಥಿತಪ್ರಜ್ಞತೆ ಕಷ್ಟಸಾಧ್ಯವೇನೋ ನಿಜ. ಆದರೆ ಆದನ್ನು ಸಾಧಿಸುವತ್ತ ಸಾಗುವವರಿಗೆ ಅತ್ಮ ವಿಮರ್ಶೆಯೇ ಸೋಪಾನ

ನಾವು ನಿಜಕ್ಕೂ ಏನು ಎಂದು ಆರಿತಾಗ ತಾನೇ ಹೊಗಳಿಕೆ ತೆಗಳಿಕೆಗೆ ಹಿಗ್ಗದಕುಗ್ಗದ ಸ್ಥಿತಿ ತಲುಪಲು ಸಾಧ್ಯ ? ನಮಗೆ ಸರಿಹೊಂದುವುದನ್ನು ಸ್ವೀಕರಿಸಿ, ಉಳಿದವನ್ನು ಕೈಬಿಡಲು ಸಾಧ್ಯ ? ಅಂದರೆ ನಾವು ಸ್ಥಿತಪ್ರಜ್ಞತೆಯತ ಸಾಗುತ್ತಿದ್ದೇವೆಂದಲ್ಲವೇ?

ಬಾಲ್ಯ, ಕೌಮಾರ್ಯಗಳಲ್ಲಿ ಬರೀ ಹೊಗಳಿಕೆಯೇ ಸಿಕ್ಕುತ್ತಿದ್ದವರ ಅತ್ಮ ವಿಮರ್ಶೆ ಮೇಲರಿಯೆಂದು ಭಾವನೆಯಾಗಿ ಬೆಳೆದೀತ್ತು. ಬರೀ ತೆಗಳಿಕೆಯೆ ನಿರಂತರವಾಗಿ ಸಿಕ್ಕುತ್ತಿದ್ದವರಲ್ಲಿ ಕೀಳರಿಮೆಯ ಭಾವನೆ ಬೆಳದೀತು.

ಬೆಳೆಯುವ ವಯಸ್ಸಿನಲ್ಲಿ ಹಿರಿಯರ ಮತ್ತು ಇತರರ ಮಾರ್ಗದರ್ಶನದ ಅವಶ್ಯಕತೆ ಹೆಚ್ಚು. ಬಾಲ್ಯ ಅನುಭವಗಳು ವ್ಯಕ್ತಿತ್ವವನ್ನು ರೂಪಿಸುತ್ತದೆಂಬುದು ಸತ್ಯ. ಏಕೆಂದರೆ ಆತ್ಮ ವಿಮರ್ಶೆಯ ಸಮತೋಲನ ಆಗಿನ ಅನುಭವಗಳನ್ನು ಆಧರಿಸುತ್ತದೆ.

ಆತ್ಮವಿಮರ್ಶೆಗೆ ಮೊದಮೊದಲು ನೋವು ನೀಡುತ್ತದೆ.ನಿಧಾನವಾಗಿ, ಮುಕ್ತವಿವೇಚನೆಯಿಂದ ಮಾತ್ರ ಆದು ನಿರ್ಮಲವಾದ ಅರಿವನ್ನು ನೀಡುತ್ತದೆ

ಆತ್ಮವಿಮ್ಮರ್ಶೆ ದೈನಂದಿನ ಅಭ್ಯಾಸವಾಗಬೇಕು. ನಮ್ಮ ಎಲ್ಲ ಅನುಭವಗಳನ್ನೂ ಅಳೆದು ಸುರಿದು ತೂಗಿ ನೋಡುವುದು ರೂಢಿಯಾಗಬೇಕು. ಭಾವನೆಗಿಂತ ವಿಚಾರಕ್ಕೆ ಹೆಚ್ಚು ಸ್ಪಂದಿಸುವುದು ಕರಗತವಾಗಬೇಕು. ಆಗ ಮಾತ್ರ ಸಾಮಾಜಿಕ ಹರಹಿನಲ್ಲಿ ನಮ್ಮ ನಿಜರೂಪವನ್ನು ಗುರುತಿಸಬಲ್ಲ ಸತ್ವಯುತವಾದ ಆತ್ಮ ವಿಮರ್ಶೆ ಮೂಡಿಬಂದು ವ್ಯಕ್ತಿತ್ವದ ವಿಕಾಸಕ್ಕೆ ಪ್ರೇರಕ ಶಕ್ತಿಯಾಗುತ್ತದೆ.

ಸೌಜನ್ಯ : ಬಿತ್ತರ, ಭಾಷಾಭಿವೃದ್ಧಿ ವಿಭಾಗ, ಕ.ವಿ. ಹಂಪಿ 583 221.

# ಹೊಗಳಿ ಯಾರನ್ನು ? ಶಿವಶಿವಾ ಎಂದು ಹೊಗಳಿ.

ಆರ್. ಗಂಗಾಧರಪ್ಪ, ನಿವೃತ್ತ ರೈಲ್ವೆ ಇಂಜಿನಿಯರ್, ಬೆಂಗಳೂರು

ಹೊಗಳಿಕೆ ಎಂಬುದು ಸರ್ವರಿಗೂ ಬೇಕಾದದ್ದು. ಆದರೆ ತೆಗಳಿಕೆ ಮಾತ್ರ ಯಾರಿಗೂ ಬೇಡ. ಹೊಗಳಿಕೆಗೆ ದೇವರೇ ಮಣಿಯುತ್ತಿರುವಾಗ, ಮಾನವನ ಮಾತೇನು ? ಆಸ್ತಿಕರಂತೂ ದೇವರನ್ನು ಸರ್ವವಿಧದಲ್ಲಿಯೂ, ಹಣವಂತರು ಯಜ್ಞ ಯಾಗಾದಿಗಳನ್ನು ಮಾಡಿಸಿ ಆ ಪರಮೇಶ್ವರನನ್ನು ವಿಶೇಷವಾಗಿ ಹೊಗಳಿಸಿ ತಾವೂ ಹೊಗಳಿ ಸರ್ವಸುಖಗಳನ್ನು ಪಡೆಯುತ್ತಾರೆ. ಹೊಗಳುವವರು ಧನಿಕನನ್ನಾಗಲಿ ಅಥವ ದಾನಿಯನ್ನಾಗಲಿ ಹೊಗಳುವವರೇ ಹೊರತು. ಸಾಮಾನ್ಯವಾಗಿ ಕಡುಬಡವನನ್ನಾಗಲಿ ಅಥವಾ ಕಡುಲೋಭಿಯನ್ನಾಗಲಿ ಹೊಗಳುವುದಿಲ್ಲ. ಅದರಲ್ಲೂ ಕಡುಲೋಭಿಯನ್ನು 4-6 ಸಾರಿ ಹೊಗಳಿ ನಿರಾಶರಾಗುತ್ತಾರೆ. ಆದರೆ ಚತುರರಾದ ಹೊಗಳುಭಟ್ಟರು ಅಂತಹ ಲೋಭಿಗಳಿಂದಲೂ ಹಣವನ್ನು ಹೊಗಳಿ ಅಥವಾ ಹೆದರಿಸಿ ಪಡೆಯುತ್ತಾರೆ. ರಾಜಮಹಾರಾಜರುಗಳು ಮಾಶಾಸನವನ್ನೇ ಕೊಟ್ಟು ಸಾರ್ವನಿಕರ ಮುಂದೆ ದೊಡ್ಡ ದೊಡ್ಡ ಸಬೆಗಳಲ್ಲಿ ಹೊಗಳಿಸಿಕೊಳ್ಳುತ್ತಾರೆ. ಅಂದ ಮೇಲೆ ಹೊಗಳಿಕೆಗೆ ಮಣಿಯುವುದು ಮನಸ್ಯನ ಸಹಜವಾದ ಗುಣವಾಗಿರುತ್ತದೆ. ಅದೇ ರೀತಿ ತೆಗಳಿದವರ ಮೇಲೆ ತಾನು ಎಷ್ಟೆಷ್ಟೋ ಮಾಡಬಾರದ ಕೆಲಸಗಳನ್ನು ಮಾಡಿದ್ದರೂ ಅದು ಸರಿಯೆಂದು ದ್ವೇಷವನ್ನೆ ಸಾಧಿಸುತ್ತಾರೆ. ಇಂತಹ ಸಂದರ್ಭಗಳಲ್ಲಿ ಮಾರಾಮಾರಿಗಳ ಹಾಗೂ ಖೂನಿಗಳೂ ಸಹ ಎಷ್ಟೋ ನಡೆದು ಹೋಗಿದೆ. ಯಾವ ಮನುಷ್ಯನು ಹೊಗಳಿಕೆಗೆ ಉಬ್ಬಿಹೋಗದೆ ತೆಗಳಿಕೆಗೆ ಕುಸಿಯದೆ ಇರುವವನೋ ಅವನೇ ಜ್ಞಾನಿ, ಅಂತಹ ಜ್ಞಾನಿಗಳು ಸ್ತುತಿ, ನಿಂದನೆಗಳನ್ನು ಒಂದೇ ರೀತಿಯಾಗಿ ಭಾವಿಸುತ್ತಾರೋ ಒಂದು ವೇಳೆ ತಮ್ಮಲ್ಲಿ ನಿಂದೆಗೆ ಅವಕಾಶವಿದ್ದಾಗ ಅದನ್ನು ಆಹ್ವಾನಿಸಿ ಅಲ್ಪಸ್ವಲ್ಪ ತಪುಗಳು ಏನಾದರೂ ಇದೆಯೆಂದು ತಿಳಿದು ಬಂದಾಗ ಅದನ್ನು ತಿದ್ದಿಕೊಂಡು ಜ್ಞಾನಿಗಳಾಗುತ್ತಾರೆ. ಹೀಗೆ ಆಚರಿಸಲು ಮಹತ್ತರವಾದ ಸಾಧನೆ ಸರ್ವೇಂದ್ರಿಯಗಳ ನಿಗ್ರಹ ನಿತ್ಯವಶ್ಯಕ. ಸರ್ವೇಸಾಧಾರಣವಾಗಿ ಹೊಗಳುವವರು ತಮ್ಮ ಉದರ ನಿಮಿತ್ತಕ್ಕಾಗಿಯೋ ಅಥವಾ ವಿಶೇಷ ಹಣವನ್ನು ಪಡೆಯುವುದಕ್ಕಾಗಿಯೋ ಇರುತ್ತದೆ. ಇದು ತನ್ನ ಆತ್ಮಸಾಕ್ಷಿಗೆ ವಿರುದ್ಧವಾಗಿರುತ್ತದೆ. ಆತ್ಮ ಸಾಕ್ಷಿಯಾಗಿ ಹೊಗಳುವವರು ನಿಜವಾಗಿಯು ಧರ್ಮಿಷ್ಟರಾಗಿರಬೇಕು, ಸ್ಥಿರ ಮನಸ್ಸಿನವರಾಗಿರಬೇಕು. ಹೀಗಿದ್ದರೆ ಮಾತ್ರ ಅಂತಹ ಮನ್ಯುಷನು ದೇವರಿಂದ ಶಾಶ್ವತವಾದ ಮುಕ್ತಿಯನ್ನು ಪಡೆಯುತ್ತಾನೆ. ಇದು ಸತ್ಯ.

ಇನ್ನೊಂದು ವಿಷಯವೇನೆಂದರೆ ಕೆಲವು ಧನಿಕರು ಹೊಗಳಿ ಬೇಡಿದವರಿಗೆ ಒಂದೆರಡು ಬಾರಿ ಹಣವನ್ನು ಕೊಡುತ್ತಾರೆ ಮತ್ತೆ ಬೇಡಿದರೆ ಕೊಡುವುದಿಲ್ಲ. ಆದ್ದರಿಂದ ಆತನು ತೆಗಳಿಕೆಗೆ ಗುರಿಯಾಗುತ್ತಾನೆ. ಇಂತಹ ಸನ್ನಿವೇಶದಲ್ಲಿ ಒಂದು ಜ್ಞಾಪಕಕ್ಕೆ



ಬರುತ್ತದೆ. ಅದೇನೆಂದರೆ ಒಬ್ಬ ಭಿಕ್ಷುಕನು ಪ್ರತಿ ದಿನವೂ ಒಬ್ಬರ ಮನೆಯಲ್ಲಿ ಭಿಕ್ಷೆಯನ್ನು ತಪ್ಪದೆ ಪಡೆಯುತ್ತಿರುತ್ತಾನೆ. ಹಾಗೇನಾದರೂ ಒಂದು ದಿನ ಭಿಕ್ಷೆಯನ್ನು ಪಡೆಯದಿದ್ದರೆ, ಈದಿನ ಇವರಿಗೇನು ಬಂತೋ ಕೇಡು, ದಿನವೂ ಭಿಕ್ಷೆನೀಡುತ್ತಿದ್ದವರು ಈದಿನ ಇಲ್ಲ ಮುಂದೆ ಹೋಗು ಅನ್ನುತ್ತಾರೆ, ಹಾಗೆಂದು ತೆಗಳುತ್ತಾನೆ. ಅಷ್ಟೇ ಅಲ್ಲ "ಇವರಮನೆ ಹಾಳಾಗಿಹೋಗಾ" ಅಂತ ಬೈದುಕೊಂಡು ಹೋಗುತ್ತಾನೆ. ಆದರೆ ಅಂತಹ ಭಿಕ್ಷುಕನಿಗೆ ಜನ್ಮಜನ್ಮಾಂತರಕ್ಕೂ ಭಿಕ್ಷೆ ಬೇಡಿ ಜೀವಿಸುವುದೇ ಶಾಶ್ವತವಾಗುತ್ತದೆ.

ಆದ್ದರಿಂದ ಸಾಮಾನ್ಯ ಮಾನವನನ್ನು ಕುಭೇರನ ಸಮಾನನೆಂದು ಹೊಗಳಿ ಬೇಡುವುದಕ್ಕಿಂತಲೂ, ಭಗವಂತನನ್ನು ಅನನ್ಯ ಭಕ್ತಿಯಿಂದ ನಿಶ್ಚಲ ಮನಸ್ಸಿನಿಂದ, ಕಲ್ಮಷವನ್ನು ಬದಿಗೊತ್ತಿ, ಆತ್ಮ ಸಾಕ್ಷಿಯಾಗಿ ಹೊಗಳುವುದು ಅತ್ಯಂತ ಶ್ರೇಯಸ್ಕರ, ಹಾಗೂ ಮೋಕ್ಷಕ್ಕೆದಾರಿ. ಮತ್ತೊಂದು ಏನೆಂದರೆ ಧರ್ಮಿಷ್ಟನಾದವನು ತನ್ನ ಉದರ ನಿಮಿತ್ತಕ್ಕಲ್ಲದೆ ಪರೋಪಕಾರ್ಯಕ್ಕಾಗಿಯೇ ಮತ್ತೊಬ್ಬ ಧರ್ಮಿಷ್ಟ ಧನಿಕನನ್ನು ಹೊಗಳಿ ಅಂತಹ ಧರ್ಮಿಷ್ಟನಿಂದ ಪಡೆದ ಹಣವನ್ನು ಸದ್ವಿನಿಯೋಗ ಮಾತ್ರದಿಂದ ಉಭಯತ್ತರಿಗೂ ಅಂದರೆ ಕೊಟ್ಟದಾನಿಗೂ ಯಶಸ್ಸು ಸದ್ವಿನಿಯೋಗ ಮಾಡಿದ ಧರ್ಮಿಷ್ಟನಿಗೂ ಕೀರ್ತಿ ಲಭಿಸುವುದು ಸತ್ಯ.

ಈ ಮೇಲ್ಕಂಡ ತಿಳುವಳಿಕೆಯಿಂದ ಸಾಮಾನ್ಯ ಜನರ ಹೊಗಳಿಕೆಯನ್ನು ತಿರಸ್ಕರಿಸಿ ತೆಗಳಿಕೆಗೆ ಅವಕಾಶವೇ ಕೊಡದೆ ಸದಾ ಕಾಯಕವನ್ನು ಮಾಡಿ ಗಳಿಸಿ ತನಗಾಗಿ ಮಿಕ್ಕದನ್ನು ದಾಸೋಹಮಾಡುತ್ತಾ ಸದಾಕಾಲದಲ್ಲೂ ಶಿವಶಿವಾ ಎನ್ನುತ್ತಾ ಮಹಾಮಹಿಮರಂತೆ ನರಕವನ್ನು ಮೀರಿ ಶಿವಾಸಾಯುಜ್ಯವನ್ನು ಪಡೆಯರಿ ತಪ್ಪದೆ ಶಿವ ಶಿವಾ ಎನ್ನಿ.

ಶಿವ ಶಿವಾ ಎನ್ನಿ ದೇವತಾಸ್ತುತಿ

ಶ್ಲೋಕ :- ಯೋಗದ ಸಂತಪದಕನ್ನು ಸಕ್ರಿಯಂಗಳ ತಿಲಿರಿ
ರಾಗ ದಾನನಮರಿಲೆ ಯಕ್ಷ ಮಾನವ ।
ಮೇಗೆ ಭಕ್ತಿಯ ಬೇಕು ತತ್ವಗಳ ತೊಡುವುದ ನಿಜ ।
ದಾಗು ಕಳೆ ಬಿಂದುಗಳ ಬಿತ್ತು ಮಾನವ ।
ಆಗ ಮದ ಸಾರಲಾಮ್ನಾಯಗಳ ತಿರುಳುಮನು ।
ಪೊಗದಣಿ ಮೋಷದುಪಕಾರ್ಯಂ ಮಾನವ ।
ಭೋಗಗಳ ಹೊಣೆ ಭಜಕರ ಮರತರು ಸಂಸಾರ ।
ರೋಗ ಔಷಧವಿದಲ್ತೆ ಮಾನವ.

ತಾತ್ಪರ್ಯ :- ಎಲೆ ಮನುಷ್ಯನೆ ಯೋಗಕ್ಕೆ ಪ್ರಣವಾದದ್ದು, ತಪಸ್ಸಿಗೆ ತನುವಾದದ್ದು, ಒಳ್ಳೆ ಯುಗಾದಿ ಸುಕರ್ಮಗಳನ್ನು ಮಾಡುವುದಕ್ಕೆ ಅಗ್ನಿ ಸ್ವರೂಪ ವಾದದ್ದು, ವೈರಾಗ್ಯಕ್ಕೆ ಮುಖ್ಯವಾದದ್ದು, ಜ್ಞಾನದ ಕಣ್ಣಾದದ್ದು, ಇದಲ್ಲದೆ ವಿಶ್ವಾಸಕ್ಕೆ ಮೂಲವಾದದ್ದು ಉಂಟುಮಾಡುವಂತಾದ್ದು. ಕಲಾಬಿಂದುಗಳಿಗೆ ಬೀಜವಾದದ್ದು ವೇದಸಮೂಹಗಳ ಅಂತಸ್ಥಾನವಾದದ್ದು, ಮಂತ್ರಗಳ ಸಮುದಾಯದ ಸರಹದ್ದಾದಂತದು ಮುಕ್ತಿಗೆ ಉಪಕಾರ ಸ್ವರೂಪವಾದದ್ದು ಸೌಖ್ಯಗಳಿಗೆ ಜಾಮಿನಾದದ್ದು. ಮಂತ್ರಧ್ಯಾನ ಮಾಡುವವರಿಗೆ ಕಲ್ಪವೃಕ್ಷವಾದದ್ದು ಪ್ರಪಂಚವೆಂಬ ಬೇನಗೆ ಈ ಶಿವ ಶಿವಾ ಎನ್ನುವಂಥಾದಲ್ಲವೆ ದಿವ್ಯಾಪಥವು ಶಿವಶಿವ ಎನ್ನು

ಶ್ಲೋಕ :- ಸೂತ ಶೌನಕ ಸನಕ ಕಪಿಲ ಕಣ್ವ ದಧೀಚಿ ।
ಗೌತಮಾಗಸ್ತ್ಯಾದಿ ಋಷಿಗಳ್ ಮಾನವ,
ಒಲಿದನೆ ತೊಟ್ಟಟ್ಟು ನೋಡಿಪಾದಾಗಿದುದು ।
ಶಾತಿಶಯ ಮುಕ್ತಿ ಪಡದಿರ್ಪರ್ ಮಾನವ ।
ಭೂತಳ ದೊಳಿದರ ಬಲದಿಂದ್ವಿದಳ ।
ಸಾಮಿನಿ ಶ್ವೇತ ತಿರುನೀಲಕರಾದ್ವರ್ ಮಾನವ ।
ಪ್ರೇತಪತಿಯದೆಯ ಬಿರ್ರನೆ ಬಿರಿಯುವಂ ತೊಡೆದು।
ವೈತರಣಿಯನು ದಾಂಟೆ ಪೋದರ್ ಮಾನವ

ತಾತ್ರ್ಯರ್ಯ :- ಸೂತ ಶೌನಕ, ಸನಕ, ಕಪಿಲ, ಕಣ್ವ, ದಧೀಚಿ, ಗೌತಮ, ಆಗಸ್ತ್ಯ ಇವರೇ ಮೊದಲಾದ ಮುನಿ ಶ್ರೇಷ್ಠರು, ಯಲವೋ ಮನುಷ್ಯನೇ ಶಿವ ಶಿವಾ ಎನ್ನುವುದನ್ನು, ಪ್ರೀತಿಯಿಂದ ತೊಟ್ಟುಕೊಂಡು, ಉಟ್ಟುಕೊಂಡು ವಿಚಾರಿಸಿ ನೆಟ್ಟಗೆ ತಿಂದುಚಲ್ಲಿ ಅಥವಾ ಉಗಳಿ ಶ್ರೇಷ್ಠತ್ವದಿಂದ ಕೂಡಿದ ಮೋಕ್ಷವನ್ನು ಪಡೆದಿರುವರು. ಭೂಮಿಯ ಮೇಲೆ ಈ ಶಿವ ಶಿವಾ ಎನ್ನುವ ಬಲತ್ಕಾರದಿಂದ ಸಾಮಿನಿ ಶ್ವೇತ, ತಿರುನೀಲಕಂಠ ಇವರೇ ಮೊದಲಾದವರು ಯಮನ ಹೃದಯವನ್ನು ಬಿರಿಯುವಂತೆ ಚನ್ನಾಗಿ ಪಾದದಿಂದ ತಾಡಿಸಿ ವೈತರಣಿಯೆಂಬ ನರಕವನ್ನು ಮೀರಿ ಹೋದರು. ಆದ್ದರಿಂದ ಶಿವ ಶಿವಾ ಎನ್ನು ಮಾನವ.





# ನಾ ಹೋಗಲಾರೆ

## (ಏಕಾಂತ ನಾಟಕ)

ರಾಜೇಂದ್ರಶಿಶು, ನಂ. 242, ಉತ್ತರಾದಿಮಠದ ರಸ್ತೆ, ಮೈಸೂರು.

(ವಿಶಾಲವಾದ ಮನೆ ಪಲ್ಲಂಕದ ಮೇಲೆ ಬಸವಣ್ಣ ಪವಡಿಸಿದ್ದಾನೆ. ಎಲ್ಲೆಡೆ ನೀರವತ ನಿಶ್ಯಬ್ದತೆ. ಅಣ್ಣನನ್ನರಸಿ ಕೂಡಲಸಂಗನ ಪ್ರವೇಶ.)

ಕೂಡಲ ಸಂಗ :- ಬಸವಾ .... ಬಸವಣ್ಣ .... (ಮತ್ತೆ ಜೋರಾಗಿ) ಬಸವರಸ.... ....ಬಸವರಾಜ ಅಬ್ಬಾ ಎಂಥಗಾಢ ನಿದ್ದೆಯಲ್ಲಿ ಮುಳುಗಿರುವನು ಈ ಬಸವಣ್ಣ.

ಬಸವಣ್ಣ :- (ನಿದ್ದೆಯ ಮಂಪರಿನಲ್ಲಿ) ಯಾರು ಕೂಗಿದರೆನ್ನ ಈ ಅವೇಳೆಯಲ್ಲಿ? ಯಾರಿರಬಹುದು?

ಕೂಡಲ ಸಂಗ :- (ಹತ್ತಿರ ಹೋಗಿ ಬಸವಣ್ಣನನ್ನು ಅಲುಗಾಡಿಸಿ) ಬಸವಾ ಮಗು ಬಸವರಸ....ಬಸವಣ್ಣ

ಬಸವಣ್ಣ :- (ಎದ್ದು ನೋಡಿ) ಓ ಸಂಗಮನಾಥ. ಬಾ ತಂದೆ ಬಾ ಕಂದನನು ಕಾಣಲು ಭಕ್ತರ ಮನೆಗೈತಂದೆಯ ಸಂಗಮನಾಥ ಬಾ ತಂದೆ ಬಾ ಭಕ್ತರನಿಧಿಯೆಬಾ ಕರುಣಾ ಸಾಗರನೆ ಬಾ.

ಕೂಡಲಸಂಗ :- (ಮಧ್ಯ ತಡೆದು) ಹಾಂ.... ಹಾಂ.... ಸಾಕು ಬಸವರಸ ಸಾಕು ನಿನ್ನ ಹೊಗಳಿಕೆ.

ಬಸವಣ್ಣ :- (ಬೆಚ್ಚಿ) ಏಕೆ ತಂದೆ ಬೇಸರವಾಯಿತೆ ? ಕ್ಷಮೆಯಿರಲಿ ಕಂದನಲಿ.... (ಸ್ವಲ್ಪ ತಡೆದು) ತಾವಿಲ್ಲಿಗೈತಂದುದರ ಕಾರಣ ಕೇಳಬಹುದೆ ? ತಂದೆ

ಕೂಡಲ ಸಂಗ :- ಕಾರಣವಿಲ್ಲದೆ ಬರುವೆನೆ ನಾನು. ಬಸವಣ್ಣ ನಿನಗೆ ನೆನಪಿರ ಬೇಕು. ಹಿಂದೊಮ್ಮೆ ಕಲ್ಯಾಣವ ಕೈಲಾಸವಾಗಿಸಿ ಕಲ್ಯಾಣದಲಿ ಭಕ್ತಿಯ ಪ್ರಣತೆಯನ್ನು ಹಚ್ಚಿದುದು. ಆ ಮಹಾ ಬೆಳಗಿನ ಜಗವ ಬೆಳಕಾಗಿಸಿದ್ದು. ಅಂದು ನೀ ಕೈಲಾಸ ವಾಗಿಸಿರ್ದ ಬುವಿ ಇಂದು ಏನಾಗಿದೆ ನೋಡು ಬಸವಣ್ಣ. ಆದನ್ನರುಹಿ ಮತ್ತೆ ಬುವಿಯ ಸಗ್ಗವಾಗಿಸುವ ಇಚ್ಛೆಯಿಂದ ಆನಿಲ್ಲಿಗೆ ಬಂದಿಹೆನು. ನಿನ್ನಿಂದೊಂದು ಕೆಲಸವಾಗ ಬೇಕಲ್ಲ ಮಗು.

ಬಸವಣ್ಣ :- ನಿನ್ನನಗಲದತೆರ ಇಹ ಕಾರ್ಯವಾವುದಿದ್ದರೂ ಹೇಳು ತಂದೆ.

ಕೂಡಲ ಸಂಗ :- (ಜೋರಾಗಿ) ಬುವಿಯ ಕೈಲಾಸವಾಗಿಸಲು ನೀಮತ್ತೊಮ್ಮೆ ಅವತರಿಸಬೇಕು ಬಸವಣ್ಣ

ಬಸವಣ್ಣ :- (ಬೆಚ್ಚಿ) ಏನು ? ಮತ್ತೊಮ್ಮೆ ಅವತರಿಸಬೇಕೆ ? ಇಂದಾವ ತಪ್ಪಿಗೆ ಈ ಶಿಕ್ಷೆ ತಂದೆ. ಅಂದು ಒಂದು ಸುಳ್ಳು ಹೇಳಿದೆನೆಂಬ ಒಂದು ತಪ್ಪಿಗೆ ನಿಮ್ಮ ಮಣಿ

ಹವನಾಂತು ಬುವಿಯಲ್ಲಿ ಜನಿಸಿದೆ. ನೀವು ಬೆಸಸಿದಕಾರ್ಯವ ನಿನ್ನಲಿ ಕೈಗೊಂಡೆ ಸಾಕು ಮಾಡೈತಂದೆ ಎಂದು ಬೇಡಿ ನಿನ್ನಲಿ ಸೇರ್ದೆ ಈಗ ....ಮತ್ತೊಮ್ಮೆ.... ಬೇಡ ಪ್ರಭು ಬೇಡ.

ಕೂಡಲ ಸಂಗ :- ನಿನ್ನೊಡನೆ ನಾನಿರುವೆ ಬಸವಣ್ಣ ಕರೆದೊಡೋ ಎಂಬೆ. ಆಗದು ಎನ್ನದಿರು. ನೀನೆಂದು ಮೇಲೆತ್ತಿದ್ದ ಜನರತ್ತ ನೋಡು. ನಿನ್ನ ತತ್ವವ ಮರೆತು. ದ್ವೇಷದುರಿಯಲಿ ಮುಳುಗಿಹರು ಅದನಳಿಸಿ ಪ್ರೀತಿ ವಾತ್ಸಲ್ಯದ ಜೇನ ಮಳೆಯ ಹರಿಸು ಮಗು .... ಪ್ರೀತಿ ವಾತ್ಸಲ್ಯದ ಜೇನ ಮಳೆಯ ಹರಿಸು.

ಬಸವಣ್ಣ :- ಇಂದಿದು ನನ್ನಿಂದಾಗದು ತಂದೆ ಎತ್ತ ನೋಡಿದರೂ ಸಿರಿಗರ ಹೊಡೆದವರೆ ಅವರ ಸುಡಿಸಲಾಗದು ತಂದೆ ಯೋಚಿಸಿ ಅಂದು ಎಂಥ ಜನರಿದ್ದರು ಆದರೂ ಆ ಕೊನೆಯ ದಿನ ಕಲ್ಯಾಣ ಕ್ರಾಂತಿಯಾದ ದಿನ. (ದುಖಿಸುತ್ತ ಅಯ್ಯೋ ನೆನೆದರೆ ಹೃದಯ ನಡುಗುತ್ತದೆ ಆ ಕಾರಣವೆ ಸಾಕು. ಮಾಡೈ ತಂದೆ ಲೋಕದಾಟವ ನಿನ್ನು ತೆರವು ಕೂಡು ತಂದೆ ಎಂದು ನಿನ್ನ ಬಳಿ ಬಂದೆ. ಸಧ್ಯ ನಿನ್ನ ಕುರುಣೆ ಎನಗಾಯ್ತು.

ಕೂಡಲ ಸಂಗ :- ನಿಜ ಬಸವಣ್ಣ ನಿಜ ಕಲ್ಯಾಣದ ಹಣತೆ ಹೊಡೆದು ಚೂರಾಯ್ತು ಜ್ಯೋತಿ ನಂದಿತು. ಈಗ ಆ ಜ್ಯೋತಿಯ ನೀನೆ ಬೆಳಗಿಸಬೇಕಾಗಿದೆ ಬಸವಣ್ಣ.

ಬಸವಣ್ಣ ಇಲ್ಲ ತೆಂದೆ ನನ್ನಿಂದಾಗದು.

ಕೂಡಲ ಸಂಗ :- (ಸ್ವಗತ) ಇವನನ್ನೆಂತು ಒಪ್ಪಿಸಲಿ ಒಂದು ಉಪಾಯ ಹೊಳೆಯುತಿವೆ. (ಜೋರಾಗಿ ಬಸವಣ್ಣ ನನ್ನೊಡನೆ ಬಾ. ಬುವಿಯುತ್ತ ದೃಷ್ಠಿ ಹರಿಸಿ ಒಲ್ಲೆನೆನ್ನದಿರು (ಸ್ವಲ್ಪದೂರ ಕರೆದು ತಂದು ಬುವಿಯತ್ತ ತೋರಿ) ಹಾಂ....ಹೀಗೆ ಬಾ ಅದೋ ಅದೇ.... ಅದೇ ಮರ್ತ್ಯಲೋಕ (ಭುಜದ ಮೇಲೆ ಕೈಯಿಟ್ಟು) ಹಾಂ.... ಹಾಗೆ ಹಾಗೆ ನೋಡುತ್ತಿರು ಬಸವಣ್ಣ

ಬಸವಣ್ಣ :- (ನೋಡಿ) ಇದೇನು ಸಂಗಮನಾಥ. ನಿನ್ನ ಗುಡಿಯು ಬಳಿ ಇಷ್ಟು ಜನ? ಹುಚ್ಚು ಜನ ನಿನ್ನ ಗುಡಿಯಲ್ಲಿ ಬಂದಿಸಿಹನೆಂಬ ಭ್ರಮೆಯಲ್ಲಿ ಮುಳುಗಿಹರು ಬೇರೆಯುವರ ಕೈಲಿ ಪೂಜೆ ಮಾಡಿಸಿಹರು

ಕೂಡಲ ಸಂಗ :- ನೀನೆ ಹೇಳರುವೆಯಲ್ಲ. ತನ್ನ ಪೂಜೆಯ ತಾ ಮಾಡ ಬೇಕೆಂದು ಅದಮು ರೆತಿಹರು. ಮೌಢ್ಯತೆಗೆ ಬಲಿಯಾಗಿ ತರುತಿಹರು ಹಣ್ಣುಕಾಯಿಗಳ ಅದ ಪೂಜಾರಿಗಿತ್ತು ಧನ್ಯರಾಗಿಹರೆಂದು ಭಾವಿಸಿಹರು ಹುಚ್ಚು ಜನ, ದೇಗುಲದಿ ನಾನಿಹೆನೆಂಬ ಭ್ರಮೆಯ ಮುಳುಗಿಹರು.

ಬಸವಣ್ಣ :- ನಿಜ ತಂದೆ ತಮ್ಮಂತರಂಗದಿ ನೆಲಸಿರುವ ನಿನ್ನ ನೀ ಸರ್ವಂತರ್ಯಾಮಿಯೆಂಬುದ ನಗುವ ಹೂ ಹೆನಲ್ಲಿನಲಿ, ಮುಗ್ದತೆಯ ಸೂಸುವ ಮಗುವ ನಗೆ



ಮೊಗದಲ್ಲಿ ಹರಿವ ಸಲಿಲ ನಿನಾದದಲಿ ಕರುಣಾರ್ದ್ರ ಹೃದಯದಲ್ಲಿ ನೀನಿರುವುದ ಮರೆತುಸುತ್ತುವರು ದೇಗುಲಗಳ, ಕಲ್ಲುಗಳ, ಮರಗಳನು ವ್ಯರ್ಥವಾಗಿ

ಕೂಡಲ ಸಂಗಮ :- (ಇನ್ನೊಂದೆಡೆ ತೋರಿ) ಇತ್ತ ನೋಡು ಬಸವಾ ದುಶ್ಚಟಕ್ಕೆ ಬಲಿಯಾಗಿ ಆಶ್ರಿತರ ಹೆತ್ತವರ ದುಃಖಕ್ಕೆ ದೂಡಿ ತಾ ಮಸಣಕ್ಕೆ ತೆರಳುತಿಹ ದೃಶ್ಯವನ್ನು.

ಒಸವಣ್ಣ :- ಬುವಿಯಲ್ಲಿ ಮದ್ಯಪಾನ ಧೂಮಪಾನ ಮುಂತಾದ ದುಶ್ಚಟವನಳಿಸೆ ಪ್ರಯತ್ನ ನಡೆದಿದೆಯಂತೆ

ಕೂಡಲ ಸಂಗ :- ಪ್ರಯತ್ನವೆನೋ ನಡೆದಿದೆ ಅಷ್ಟೆ (ಇನ್ನೊಂದೆಡೆ ತೋರಿ) ಇದೋ ಈ ಕಡೆ ನೋಡು ಬಸವಾ. ನಿನ್ನ ಸೋದರಿಯುರ ಸ್ಥಿತಿಯ ವರದಕ್ಷಿಣೆಗೆ ಬಲಿಯಾಗಿಹಳು. ಸಿರಿಗರ ಹೊಡೆದವರು ಮಾಡುತಿಹ ಪರಿಯ ನೋಡು ಬಸವಣ್ಣ

ಬಸವಣ್ಣ :- ನೋಡಲಾರೆ ನಾ ತಂದೆ (ದುಃಖಿಸುತ್ತ) ಇದೇನು ಪ್ರಭು ಆಮುಗ್ಧತೆಯ ಶಿಶುವ ಕೊಡಗೂಸಿನಂಥ ಮಗುವ ಎಲ್ಲಿಗೆ ಒಯ್ಯುತಿಹರು

ಕೂಡಲ ಸಂಗ :- ಮುಗ್ದತೆಯ ಶಿಶುವ ದೇವದಾಸಿಯಾಗಿಸಿಹರು. ಮುಗ್ದತೆಯ ಕಂಗಳಿಗೆ ಮೌಢ್ಯತೆಯ ಬಟ್ಟೆಕಟ್ಟಿದ ಸಮಾಜ ಅವಳ ದೇವದಾಸಿಯಾಗಿಸಿಹರು. ಇಂದವಳ ಸಲಹುವರಾರಿಲ್ಲ ಬಸವಣ್ಣ.

ಬಸವಣ :- (ಕಣ್ಣೀರು ಸುರಿಸುತ್ತ) ಅಯ್ಯೋ ನೋಡಲಾರೆನು ತಂದೆ (ಅಳುತ್ತ) ನೋಡಲಾರೆನು.... ತಂದೆ

ಕೂಡಲ ಸಂಗ :- ಕಂಗಳಲಿ ನೀರೆಕೆ ಬಸವಣ್ಣ. ಸುರಿಸುತಿಹ ನೀರನ್ನು ಒರೆಸುವವ ನೀನು. ಅದಕೆ ಹೇಳಿದುದು ಬುವಿಯತ್ತ ತೆರೆಳೆಂದು ಅಳುವ ಕಂಗಳಲಿ ನಗೆಯ ಹೂ ಅರಳಿಸೆಂದು. ದ್ವೇಷ ರೋಷವನಳಿಸಿ ಪ್ರೀತಿ ಹೊನಲನು ಹರಿಸೆಂದು. ಅ ಎಡೆ .... ಅತ್ತ ನೋಡುಬಸವಣ್ಣ

ಬಸವಣ್ಣ -: ನೋಡುತಿರೆ ಕಂಗಳು ತುಂಬಿ ನೋಡಲಾಗುತ್ತಿಲ್ಲ ತಂದೆ.

ಕೂಡಲ ಸಂಗ ಕಲಬೆರಕೆಯಿಂ ಸಾವಿರಾರು ಜೀವಿಗಳ ಹತ್ಯೆ ನಡೆದಿದೆ ಇಲ್ಲಿ. ಲಂಚ ವಂಚನೆಗೆ ಕೈಯೊಡ್ಡಿಹರು. ನ್ಯಾಯ ದೇವತೆಯ ಕಂಗಳಿಗೆ ಬಟ್ಟೆ ಕಟ್ಟಿಹ ಜನರು ಅವರ ನಡೆಯೊಂದು ಪರಿ ನುಡಿಯೊಂದು ಪರಿ ಆಗಿಹುದು

ಬಸವಣ್ಣ :- ಅದಕೆ ಚಿಂತಿಸಿದುದು ದೇವಾ ಇಂಥ ಕೂಪಕ್ಕೆ ನನ್ನನು ದೂಡುವುದು ಸರಿಯೆ ? ನೀನೇ ಹೇಳು ?

ಕೂಡಲ ಸಂಗ -: ಆದನ್ನಳಿಸೆ ನಿನ್ನಿಂದ ಸಾಧ್ಯ ಬಸವಣ್ಣ. ಹಿರಿಯರಿಗೆ ಗೌರವ ಮರೆಯಾಯ್ತು. ಹೆತ್ತವರ ಹೊರೆಯೊಗಿಹರು ಹಸಿದವಗೆ ತುತ್ತನ್ನು ಇಕ್ಕದವರು ತಿನ್ನಲಾಗದೆ ಹೊರಗೆ ಚೆಲ್ಲುತಿಹರು. ಹಸಿದ ಮಗುವಿಗೆ ಒಳಿಲೆ ಹಾಲು ಕೊಡದೆ ಜನ ಅಭಿಷೇಕಕ್ಕೆ ಕೊಡಹಾಲು ಸುರಿಯುವರು. ಆದಕ್ಕೆ ಹೇಳಿದುದು ಬುವಿಯತ್ತ ತೆರಳು. ಸಮತೆಯನು ಸಾರು ಬಸವರಾಜನಾಗಿ ಮೆರೆ ಬಸವರಸನಾಗಿ ಮೆರೆ

ಬಸವಣ್ಣ : ರಾಜತ್ವ ಮರೆಯಾಗಿ ಪ್ರಜಾಪ್ರಭುತ್ವದಲಿ ಪ್ರಜೆಗಳಿಗೆ ನೆಲೆಯಿಲ್ಲ ಅರಸತ್ವ ಎನಗೇಕೆ ತಂದೆ. ಇಂಥ ನಿಷ್ಠುರದ ಜಗದಲ್ಲಿ ನಾನೆಂತಿರಲ್ಲ ತಂದೆ.

ಕೂಡಲ ಸಂಗ :- ಹಿಂದೆಯೆ ಹೇಳಿದ್ದೆನಲ್ಲ ನಿನ್ನೊಡನೆ ನಾನಿರುವೆ ಎಂದು ಚಿಂತಿಸದೆ ನಡೆ ನೀತಪ್ಪೆಸಗಿದ್ದರೆ ಶಾಪವೀಯುತಿದ್ದೆ. ಆದರೆ ಇಂದು ಅಂತೆಸಗುವಂತಿಲ್ಲ ನನ್ನಾಣತಿಯನ್ನು ಮೀರದೆ ನಡೆ.

ಬಸವಣ್ಣ :- ಇಲ್ಲ ತಂದೆ ನನ್ನಿಂದಾಗದು ಪಂಚವಿಂಶತಿಲೀಲೆಯನು ಮರೆದ ತಂದೆ ನೀನು. ನೀನೀಗ ಬಂದು ಲೀಲೆಯನು ಮೆರೆ. ಆಡುತಾಂಡವ ನಾಟ್ಯ. ಹಣೆಗಣ್ಣ ತೆರೇ ನೀನು, ಎಲ್ಲ ಭಸ್ಮವ ಮಾಡು ಹೊಸಲೋಕ ಸೃಷ್ಟಿಸು ಬುವಿಯಲ್ಲಿ ಅವತರಿಸೆಂಬ ನುಡಿಯುಬಿಟ್ಟು ಬೇರಾವ ಶಾಪವಿತ್ತರೂ ಅನುಭವಿಸುವೆ ತಂದೆ ನಿನ್ನನಗಲದ ಸುಖವ ನೀಡೆನಗೆ ತಂದೆ ದ್ವೇಷದುರಿಯಲ್ಲಿ ಮುಳುಗಿಹ ಈ ಜಗಕೆ ನಾ ಹೋಗಲಾರೆ

ಕೂಡಲ ಸಂಗ :- ನೀ ಹೊಗಲೇಬೇಕು ಬಸವಣ್ಣ. ನಾನಿನ್ನು ಬರುತ್ತೇವೆ. ನೀನು ಹೋಗಲೇ ಬೇಕು. ನೀನುಬುವಿಯನುಳಿಸೆ ಹೋಗಲೆ ಬೇಕು. (ನಿಷ್ಕ್ರಮಣ)

ಬಸವಣ್ಣ :- ಇಲ್ಲ ತಂದೆ ಇಂಥ ನಿಷ್ಠುರದ ಜಗತ್ತಿಗೆ ನಾ ಹೋಗಲಾರೆ ........ನಾ ಹೋಗಲಾರೆ (ಪ್ರವೇಶ ನೀಲಾಲೊಚನೆ)

ನೀಲಾಲೋಚನೆ :- (ಬಸವಣ್ಣನನ್ನು ಎಬ್ಬಿಸುತ್ತ) ಪ್ರಭು ಪ್ರಭು ಇದೇನು ಕನಸು ಕಂಡಿರಾ ? ಎಚ್ಚೆತ್ತುಕೊಳ್ಳಿ

ಬಸವಣ್ಣ :- (ಎಚ್ಚರಾಗಿ) ಹೌದು ನೀಲ ಅಬ್ಬಾ ಎಂಥ ಕನಸು ಕಂಡೆ

ನೀಲಾಲೋಚನೆ :- ಏನೆಂದು ಕೇಳಬಹುದೆ



ಬಸವಣ್ಣ :- ಕನಸಿನಲಿ ಸಂಗಮನಾಥ ಬಂದಿದ್ದ. ಬಂದವನು ಹೀಗೆ ಹೇಳಬಹುದೆ ನೀಲ ....ಹೀಗೆ ಹೇಳಬಹುದೆ ?

ನೀಲಾಲೋಚನೆ ಏನೆಂದು ಹೇಳಿದ ಆ ಸಂಗಮನಾಥ

ಬಸವಣ್ಣ :- ಬುವಿ ಮತ್ತೆ ಅಧರ್ಮದ ಬೀಡಾಗಿದೆಯಂತೆ. ನರಕದ ಗೂಡಾಗಿದೆಯಂತೆ. ನೀಲ ಆದನ್ನಳಿಸಿ ಸಗ್ಗವಾಗಿಸಲು ನನ್ನನ್ನು ಮತ್ತೊಮ್ಮೆ ಬುವಿಯಲ್ಲಿ ಅವತರಿಸೆಂದು ಹೇಳಿದ ನೀಲ ........ಹೀಗೆ ಹೇಳಬಹುದೆ ?

ನೀಲಾಲೋಚನೆ :- ಚಿಂಸತಿದಿರಿ ಪ್ರಭು ಬರಿ ಕನಸೆಂದು ತಿಳಿಯಿರಿ

ಬಸವಣ್ಣ (ಚಿಂತಿಸುತ್ತ) ಉದಿಸೆಂದು ಅಪ್ಪಣೆಯಿತ್ತು ಕೋಪದಿ ಹೊರಟು ಹೋದನಲ್ಲ

ನೀಲಾಲೋಚನೆ :- ತಂದೆಗೆ ಮಕ್ಕಳ ಮೇಲೆ ಕೋಪವೆ ? ಚಿಂತಿಸದಿರಿ ಪ್ರಭು ಭಕ್ತಿಗೆ ಸುಲಭವಾಗಿ ಆತ ಒಲಿವ. ಅವನನರ್ಚಿಸಿ ಅವನೊಲುಮೆಯನ್ನು ಪಡೆಯೋಣ.ನಾನು ಪೂಜೆಗೆ ಅಣಿಮಾಡುತ್ತೇನೆ (ನಿಷ್ಕ್ರಮಣ)

ಬಸವಣ್ಣ :- ಆಯಿತು ನೀಲ ಇಬ್ಬರೂ ಸೇರಿ ಪೂಜಿಸಿ ಅವನೊಲುಮೆ ಪಡೆಯೋಣ (ಹಾಡುತ್ತ ಹೊರಡುವರು)

ನಾದ ಪ್ರಿಯ ಶಿವನೆಂಬರು ನಾದ ಪ್ರಿಯ ಶಿವನಲ್ಲ
ವೇದ ಪ್ರೀಯ ಶಿವನೆಂಬರು ವೇದ ಪ್ರಿಯ ಶಿವನಲ್ಲ
ನಾದವ ಮಾಡಿದ ರಾವಣಗೆ ಅರೆ ಆಯಸ್ಯವಾಯ್ತು
ವೇದವ ನೋದಿದ ಬ್ರಹ್ಮಂಗೆ ಶಿರಹೊಯ್ತು
ನಾದ ಪ್ರಿಯನೂ ಅಲ್ಲ, ವೇದ ಪ್ರಿಯನೂ ಅಲ್ಲ
ಭಕ್ತಿ ಪ್ರಿಯನು ನಮ್ಮ ಕೂಡಲ ಸಂಗಮ ದೇವಾ–

-ತರೆ-



# ಇತ್ತೀಚೆಗೆ ದೊರೆತ ಮೋಳಿಗೆಯ ಮಾರಯ್ಯನ ಇನ್ನೊಂದು ವಚನ

ಪ್ರೊ. ಎಸ್.ಎಸ್. ಭೂಸರೆಡ್ಡಿ, ಲಕ್ಷ್ಮೀ ನಗರ ಧಾರವಾಡ-8
ಡಾ॥ ಮಧು ವೆಂಕಾರೆಡ್ಡಿ, ಸಪ್ತಾಪುರ ೨ನೆಯ ಕಾಸ್ ಧಾರವಾಡ-೧

ಬಸವ ಸಮಕಾಲೀನ ಪ್ರಮುಖ ವಚನಕಾರರ ಶ್ರೇಣಿಯಲ್ಲಿ ಬರುವ ಮೋಳಿಗೆಯ ಮಾರಯ್ಯ ಕಾಯಕ ತತ್ವದ ಕೈವಾರಿ ಕಾಶ್ಮೀರದ (ಮಾಂಡವ್ಯಪುರ) ಅಧಿಪತಿಯಾದ ಮಾರಯ್ಯ ತನ್ನ ಧರ್ಮಪತ್ನಿ ಮಹಾದೇವಿಯಮ್ಮನೊಡನೆ ಕಲ್ಯಾಣಕ್ಕೆ ಆಗಮಿಸಿ ಅನುಭವ ಮಂಟಪದ ಕ್ರಿಯಾಶೀಲ ಸದಸ್ಯರಾಗಿ ಕಾರ್ಯ ನಿರ್ವಹಿಸಿರುವದು ಐತಿಹಾಸಿಕ ಸತ್ಯಸಂಗತಿಯಾಗಿದೆ. ಶರಣ ಸಂಕುಲದಲ್ಲಿ ಸರ್ವಾಂಗ ಧೀರ ಮೋಳಿಗೆಯ ಮಾರಿತಂದೆ ಎಂದು ಆತ್ಮೀಯ ಭಾವನೆಗಳನ್ನು ಅರಳಿಸಿದ ಮಾರಯ್ಯನವರು ಬಸವಣ್ಣನನ್ನು ಎನ್ನ ಚಿತ್ತಕ್ಕೆ ನಕಾರವಾಗಿ ಬಂದೆಯಯ್ಯ ಬಸವಣ್ಣ ಎಂದು ಮೊದಲಾಗಿ ಹಾಡಿ ಹೊಗಳಿದ್ದಾರೆ. ಮಹಾದೇವಿಯಮ್ಮನವರು ವಚನಕಾರ್ತಿಯರಾಗಿದ್ದು ಅವರ ದಾಂಪತ್ಯ ಜೀವನ ಸಾಮರಸ್ಯದ ಮಡುವಾಗಿತ್ತು. ಷಟ್ಸ್ಥಲ ಸಿದ್ಧಾಂತವನ್ನು ಸಮರ್ಥವಾಗಿ ಪ್ರತಿಪಾದಿಸುವ ಇವರ ವಚನಗಳು ಗಮನಾರ್ಹವಾಗಿವೆ. ಇದೀಗ ನಮಗೆ ಕೋರಿ ಕಾಗದದ ಕಟ್ಟೊಂದು ದೊರೆತಿದ್ದು ಈ ಕಟ್ಟಿನ ಹಾಳೆಗಳು ೧೨ ಉದ್ದ ೪೫ ಅಗಲವಾಗಿದ್ದು ೯-೧೦ ಸಾಲುಗಳಿವೆ ಇದರಲ್ಲಿ ಇನ್ನೂ ಅನೇಕ ಕೃತಿಗಳಿವೆ. ಅವುಗಳ ಸಂಶೋಧನೆ ನಡೆಯಬೇಕಾಗಿದೆ. ಈ ಕಟ್ಟಿನಲ್ಲಿ ದೊರೆತ ಈ ವಚನವು ವಿನೂತನವಾಗಿ ತೋರಿದ್ದರಿಂದ ಇದನ್ನು ಸಂಪಾದಿಸಲಾಗಿದೆ. ಈ ಗಾಗಲೇ ಬಿ.ಎಸ್. ಸಣ್ಣಯ್ಯ ಅವರು ಮೋಳಿಗೆಯ ಮಾರಯ್ಯನ ವಚನಗಳನ್ನು ಸಂಪಾದಿಸಿದ್ದಾರೆ. ಈ ಸಂಪುಟದಲ್ಲಿ ಪ್ರಕಟವಾದ ವಚನಗಳ ವಿವರಣೆ ಹೀಗಿವೆ ಭಕ್ತಿಸ್ಥಲ ೨೦೪ ಮಹೇಶ್ವರ ಸ್ಥರ-೧೩

ಪ್ರಸಾದಿ ಸ್ಥಲ-೧೬, ಪ್ರಾಣಲಿಂಗಿ ಸ್ಥಲ ೫೯, ಶರಣಸ್ಥಲ ಐಕ್ಯಸ್ಥಲ ೭೪, ಸಂಪೂರ್ಣ ಷಟ್ಸ್ಥಲ್ಕೆ೭ ಅಪ್ಪಾವರಣ ಬೆಡನಗಿ ವಚನಗಳು-೧೧ ಆದರೆ ಮೈ.ವಿ.ವಿ.ದ ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ ಸಂ. ೪ ರಲ್ಲಿ ಒಟ್ಟು ವಚನಗಳ ೮೯ ಎಂದು ಉಲ್ಲೆಖಿಸಲಾಗಿದೆ. ಆದರೆ ಸಣ್ಣಯನವರು ಸಂಪಾದಿಸಿದ ವಚನಗಳ ಸಂಖ್ಯೆ೫೩ ಮಾತ್ರ ಕರ್ನಾಟಕ ವಿ.ವಿ. ಯಿಂದ ಪ್ರಕಟವಾದ ಸಕಲ ಪುರಾತನರ ವಭನಗಳಲ್ಲಿ ಮಾರಯ್ಯನ ೫೩೨ ವಚನಗಳು ಪ್ರಸಿದ್ಧಿಗೆ ಬಂದಿವೆ. ನಮಗೆ ಉಪಲಬ್ಧವಾಗಿರುವ ಈ ವಚನವು ಮೇಲಿನ ಸಂಪಾದನೆಗಳಲ್ಲಿ ಬಂದಿಲ್ಲ.





ಭಕ್ತಿಸ್ಥಲವೆಂಬ ಪೃಥ್ವಿಯಲ್ಲಿ
ಜ್ಞಾನವೆಂಬ ನೇಗಿಲಂ ಪಿಡಿದು
ಅಷ್ಟಮದವೆಂಬ ಎತ್ತನೆ ಹೂಡಿ
ಓಂಕಾರವೆಂಬ ಕಳೆಗೋಲವಿಡಿದು
ನಾನಾ [ವ್ಯ] ವ್ಯಥೆಗಳೆಂಬ ಮೂಲದ ಬೇರುಗಳಂ ಕಿತ್ತು
ದುಃಖರ್ಮವೆಂಬ ಕಂಟಕದ ಹುಲ್ಲನುಂ ಕೊಯ್ದು
ಜ್ಞಾನಾಗ್ನಿಯಿಂದ ಸುಟ್ಟುರುಹಿ
ಯಿಂತಿದಹಕವಾದ ಹೊಲನ
ಬಿತ್ತುಂಬದಿನ್ಯಾವ ಪರಿಯೆಂತೆಂದೊಡೆಃ
ಸ್ಥೂಲವೆಂಬ ದಿಂಡಿಗೆ ತ್ರಿದೇವರೆಂಬ ತಾಳನಿಟ್ಟು
ತ್ರಿಕೂಟವೆಂಬ ಬಟ್ಟಲಂ ಬಲಿದು
ಕುಂಡಲಿಯಂಬ ಹಗ್ಗದಲಿ ಸೇದಿ ನಿಶ್ಚಳಂ ಮಾಡಿ
ಆಪೇಯನವೆಂಬ ಬೀಜವಂ ಪಿಡಿದು
ನಾದಬಿಂದು ಕಳೆಗಳೆಂಬ ಮಳೆಗಾಲದ ಹದಗಾಲವರಿದು
ಪಶ್ಚಿಮ ದ್ವಾರದಲ್ಲಿ ಬಿತ್ತಿ ಬೆಳದು
ನೆನಹು ಬ್ರಹ್ಮವೆಂಬ ಸಸಿಯಂ ಸಲಹಿ
ಷಡುದರುಶನವೆಂಬ ಮೆಂಚಿಕಿಯನಿಕ್ಕಿ
ಅಹಂಕಾರವೆಂಬ ಕವಣೆಯಂ ತೆಕ್ಕೊಂಡು
ಷಡಾಕ್ಷರವೆಂಬ ಬಿರಿಗಲ್ಲಿನಿಂದೆ
ಕುಟಿಲ ಕುಹಕವೆಂಬ ಹಕ್ಕಿಯಂ ಸೋವಿ
ಪೈರು ರಕ್ಷಣ್ಯವ ಮಾಡಿ
ಇಂತಿ ಹೊಲನ ಕೊಯ್ವುದಿನ್ನಾವ ಪರಿಯಂದೊಡೆ
ಚಂದ್ರ ಸೂರ್ಯರೆಂಬ ಕುಡುಗೋಲ ಪಿಡಿದು
ಜನನದ ನಿಲವಂ ಕೊಯ್ದು, ಮರಣದ ಸೂಡನುಂ ಕಟ್ಟಿ
ಆಕಾಶವೆಂಬ ಬಣಮೆಯನೊಟ್ಟಿ
ಮನೋರಥವೆಂಬ ಬಂಡಿಯಲ್ಲಿ ಹೇರಿ
ಮುಕ್ತಿಯೆಂಬ ಕೋಟಾರಕ್ಕೆ ತಂದು
ವು [ಉ] ನ್ಮನೆಯೆಂಬ ತೆನೆಯಂ ಕೊಯ್ದು
ಷಡೂರ್ಮೆಗಳಿಂದ ವಕ್ಕಲಿಕ್ಕಿ
ಪಾಪದ ಹೊಟ್ಟನುಂ ತೂರಿ

ಪುಣ್ಯದ ಸರಗನುಂ ಕಳೆದು
ಶತಕೋಟಿ ಶಂಕರನೆಂಬ ಧಾನ್ಯವಂ ಪಿಡಿದು
ಒಮ್ಮನವಂ ಮಾಡಿ
ಚಿತ್ರಗುಪ್ತರೆಂಬ ಶಾನಬೋವರ ಸಂಪುಟಕೆ-ಬರಸದೆ
ಯಮರಾಜನೆಂಬರಸಿಗೆ ತೋರನಿಕ್ಕದೆ
ಇಂತಿ ಆಭಾರವ ನಿರ್ಲೇಪವ ಮಾಡಿದ
ಒಕ್ಕಲಮಗನ ಯನಗೊಮ್ಮೆ ತೋರಿಸಯ್ಯ
ನಿಃಕಳಂಕ ಚನ್ನಮಲ್ಲಿಕಾರ್ಜುನ ||೧||

ಇದೊಂದು ತತ್ವ್ತಗಂಧಿಯಾದ ಶ್ರೇಷ್ಠ ವಚನವಾಗಿದೆ ಈ ವಚನದಲ್ಲಿ ಬಳಸಲಾಗಿರುವ ಪ್ರತಿಮೆ ಸಹಜ ಸುಂದರವಾಗಿದೆ. ಶಿವಯೋಗ ಸಾಧನೆಯ ಹಂತಗಳನ್ನು ನಿರೂಪಿಸುವ ಈ ವಚನ ಶರಣರು ಕಾಯ ಕೃಷಿಗೆ ಎಷ್ಟೊಂದು ಒತ್ತು ಕೊಟ್ಟಿದ್ದಾರೆಂಬುದು ವಿದಿತವಾಗುತ್ತದೆ.

ಸರ್ವಾತ್ಮಚೈತನ್ಯಪ್ಪ ಜಂಗಮದ ಪರಿಯ ನೋಡಾ! ಅಖಂಡ ಬಹ್ಮದ ಬಯಲೆಲ್ಲಾ ತಾನಾಗಿ, ಸುಳಿಯಲೆಡೆಯಿಲ್ಲದೆ ನಿಂದು ನಿರ್ಗಮ ನಿಯಾದಲ್ಲಿ, ಒಂದಾಸೆಯೊಳಗಿಲ್ಲದ ಅವಿರಳಜ್ಞಾನಿ ಕುರಿತೊಂದಕ್ಕೆ ಸುಳಿವವನಲ್ಲ! ಭಕ್ತಿಗಮ್ಯನು, ಉಳಿದ ಗಮನದ ತುರಿಯವಿಲ್ಲದ ತನ್ನ ನಿರ್ಗಮನದಿರವು. ಚತುರಾಕಾರ ಭೂಮಿಯೇ ಸುಖತಲ್ಪಮಂಚ; ಆಕಾಶವೇ ಮೇಲುಕಟ್ಟು, ಚಂದ್ರ ಸೂರ್ಯರೇ ಉಭಯ ಭಾಗದಲ್ಲಿ ಬೆಳಗುವ ಜ್ಯೋತಿ, ಪರಿಣಾಮವೇ ತೃಪ್ತಿ, ದಿಕ್ಕುಗಳೇ ವಸನ, ಸದ್ಗುಣವಾಸನೆಯೇ ಪರಿಮಳ, ನಕ್ಷತ್ರಂಗಳೇ ಪುಷ್ಪ, ಶಿವತತ್ವಕಾಂತಿಯೇ ಆಭರಣ, ತ್ರಿಗುಣಕೂಟವೇ ತಾಂಬೂಲ ,ಜ್ಞಾನಶಕ್ತಿಯೇ ಸಂಗ, ಪ್ರಣವಮಾದಿ ಗೀತೆ ಕೇಳಿರೇ! ಇಂತೀ ಅಷ್ಟಭೋಗದೈಶ್ವಯದಲ್ಲಿಪ್ಪ ರಾಜಯೋಗಿ ಚರಲಿಂಗ, ನಿಶ್ಚಿಂತ ನಿರ್ವಾಣಿ ನಿರಂಜನ ನಿರ್ಮಾಯ ನಿರ್ವ್ಯಸನಿ ಪರಮಜಂಗಮ. ಇಂತಲ್ಲದೆ ಕಾಯದಿಚ್ಛೆಗೆ ಸುಳಿದು ಕಳವಳಿಸಿ ತ್ರಿವಿಧಕ್ಕೆ ಬದ್ಧಕರಪ್ಪವರೆಲ್ಲಾ ಜಗತ್ಪಾವನರಪ್ಪರೆ ಹೇಳಾ ಗೊಹೇಶ್ವರಾ?



# ಬದುಕನ್ನು ಸಾರ್ಥಕಗೊಳಿಸಿರಿ

ಬಿ. ಸುಬ್ರಾಯ ಅಡಿಗ, ನಿವೃತ್ತ ಶಿಕ್ಷಕರು, ಸಂಡೂರು, ಬಳ್ಳಾರಿ ಜಿಲ್ಲೆ -583 119

ಬದುಕಿನಲ್ಲಿ ಭಯಂಕರ ವಿಪತ್ತುಗಳು ಬಂದಾಗಲೂ ಸಾಹಸ, ಮನೋಬಲ ಹಾಗೂ ಆತ್ಮವಿಶ್ವಾಸವನ್ನು ಕಳೆದುಕೊಳ್ಳದೆ ಮೆದುಳಿನ ಸಮತೋಲನವನ್ನು ಕಾಪಾಡಿಕೊಂಡವರೇ ತಮ್ಮ ಗುರಿ ತಲುಪಿದ್ದಾರೆಂದು ವಿಶ್ವದ ಇತಿಹಾಸದ ಅಧ್ಯಯನದಿಂದ ತಿಳಿದು ಬರುತ್ತದೆ. ಗೋರೀ ಮಹಮ್ಮದ್ ಹಲವುಸಲ ಪೃಥ್ವೀರಾಜ ಚಾಹಾನನೆದುರು ತಲೆ ಬಾಗಿದ. ಆದರೆ ಆತ ಮನೋಬಲ ಹಾಗೂ ಧೈರ್ಯ ಬಿಡಲಿಲ್ಲ. ಕನವಾಹ್‌ದ ಮೈದಾನಿನಲ್ಲಿ ಶೌರ್ಯದ ಜೀವಂತ ಮೂರ್ತಿಯಾದ ರಾಣಾ ಸಂಗ್ರಾಮನೊಡನೆ ಹೋರಾಡುವ ವೇಳೆ ಬಾಬರ್ ತನ್ನ ಹಾಗೂ ತನ್ನ ಸೈನಿಕರ ಸಂಕಲ್ಪ ಶಕ್ತಿಯನ್ನು ದೃಢಪಡಿಸಿಕೊಂಡು ಪರಿಸ್ಥಿತಿಯನ್ನು ಯಶಸ್ವಿಯಾಗಿ ಎದುರಿಸದೆ ಹೋಗಿದ್ದರೆ ಭಾರತದ ಇತಿಹಾಸವೇ ಬದಲಾಗುತ್ತಿತ್ತು. ಸಿಕಂದರ್, ರಾಬರ್ಟ್‌ಬ್ರೂಸ್, ನೆಪೋಲಿಯನ್, ಚರ್ಚಿಲ್ ಮೊದಲಾದ ಹಲವಾರು ಸಾಹಸಿಗಳು ಇಂಥ ವಿಪತ್ತಿನಲ್ಲೂ ಎದೆಗುಂದಲಿಲ್ಲ. ಅವರು ವಿಫಲತೆಯ ದಾಸರಾಗಲು ನಿರಾಕರಿಸಿದರು.

## ವಿಫಲತೆಗಳಿಂದ ಧೈರ್ಯಗುಂದದಿರಿ

ಹೆಚ್ಚಿನ ಜನ ಪರಿಶ್ರಮ ಹಾಗೂ ಸಂಘರ್ಷದಿಂದ ಪಲಾಯನ ಮಾಡುವವರು. ಅತಿ ಕಡಿಮೆ ಪರಿಶ್ರಮಿಸಿ ಸಫಲತೆ ಗಳಿಸಬೇಕೆಂಬುದೇ ಇಂತಹರ ಪ್ರವೃತ್ತಿ. ಇತರರು ತಿಳಿಯ ಹೇಳಿದಾಗ ತಾತ್ಕಾಲಿಕವಾಗಿ ಅವರಲ್ಲಿ ಒಂದಿಷ್ಟು ಹುರುಪು ಕಾಣಿಸಿಕೊಳ್ಳಬಹುದು. ಆಗ ಅವರು ಅರೆಮನಸ್ಸು ಹಾಗೂ ಅವ್ಯವಸ್ಥಿತ ಕ್ರಮದಿಂದ ತಮ್ಮ ಗುರಿಯತ್ತ ಸಾಗುತ್ತಾರೆ. ಆದರೆ ಅತ್ಯಲ್ಪ ಪ್ರತಿಕೂಲ ಪರಿಸ್ಥಿತಿ ಎದುರಾದರೂ ಅವರು ಗಾಬರಿಗೊಳ್ಳುತ್ತಾರೆ. ಮತ್ತೆ ಬಹುಬೇಗನೆ ಅವರು ನಿರುತ್ಸಾಹದಿಂದ ತಮ್ಮ ಪ್ರಯತ್ನವನ್ನೇ ಬಿಟ್ಟುಕೊಡುತ್ತಾರೆ. ವಿಫಲತೆ ಸಫಲತೆಯ ಸೋಪಾನವೆಂಬುದನ್ನು ಇವರು ಮರೆತುಬಿಡುತ್ತಾರೆ. ವಿಫಲತೆ ಹಾಗೂ ವಿಪತ್ತುಗಳು ಮನುಷ್ಯನಿಗೆ ಹೊಸ ಹೊಸ ಅನುಭವ ಕಲಿಸುತ್ತವೆ. ವ್ಯಕ್ತಿ ತನ್ನ ತಪ್ಪಿನ ಫಲವನ್ನು ಅನುಭವಿಸುವಾಗ ಆ ತಪ್ಪನ್ನೆ ಮತ್ತೊಮ್ಮೆ ಮಾಡದಂತೆ ಎಚ್ಚರಿಕೆ ವಹಿಸುತ್ತಾನೆ. ವಿವೇಕಿಗಳು ಜೀವನದ ಬಗ್ಗೆ ಆಶಾವಾದಿಗಳು ಆಗಿರುವ ಜನ ತಮ್ಮ ವಿಫಲತೆಗಳಿಂದಲೂ ಬುದ್ಧಿಕಲಿತು ಮುದುವರಿಯುತ್ತಾರೆ. ಮತ್ತು ತಮ್ಮ ಗುರಿ ಮುಟ್ಟಿಯೇ ವಿಶ್ರಾಂತಿಪಡೆಯುತ್ತಾರೆ. ಗುರಿ ಮುಟ್ಟಿದಾಗ ಅವರಿಗೆ ಅದೆಷ್ಟು ಸಂತೋಷ ಹಾಗೂ ಆತ್ಮ ಗೌರವದ ಅನುಭೂತಿ ಉಂಟಾದೀತೆಂದು ಸಹಜವಾಗಿಯೆ ಊಹಿಸಬಹುದು

## ನಿಮ್ಮ ತಪ್ಪನ್ನು ಇತರರ ಮೇಲೆ ಹಾಕದಿರಿ

ಅಶಿಕ್ಷಿತ ಹಾಗೂ ಅರೆಶಿಕ್ಷಿತ ಜನರೇ ಹೆಚ್ಚಾಗಿ ಅಂಧವಿಶ್ವಾಸಕ್ಕೆ ಬಲಿಯಾಗುತ್ತಾರೆ. ಇಂಥ ಜನ ಯಾವುದಾದರೂ ಕಾರ್ಯದಲ್ಲಿ ವಿಫಲರಾದರೆ ನಿರಾಶರಾಗಿ ಭಾಗ್ಯವನ್ನು ದೂರುತ್ತಾರೆ. ಅಂಥ ತಮ್ಮ ದೌರ್ಬಲ್ಯವನ್ನು ತಮ್ಮ ಸಂಪರ್ಕಕ್ಕೆ ಬರುವ ಇತರರ ಮೇಲೆ ಹಾಕುತ್ತಾರೆ. ಕಾಲದ ತೀವ್ರಗತಿಯೊಂದಿಗೆ ಹಳೆಯ ಮಾನ್ಯತೆಗಳೂ ಬದಲಾಗುತ್ತವೆಂಬುದನ್ನು ಈ ಜನ ಮರೆಯುತ್ತಾರೆ. ಸಮಯದೊಂದಿಗೆ ಮುನ್ನಡೆಯಲಾರದಾತ ಸಹಜವಾಗಿಯೇ ಹಿಂದೆ ಬೀಳುತ್ತಾನೆ. ಪರಿಣಾಮವಾಗಿ ಆತ ದುಃಖಕ್ಕೀಡಾಗಬೇಕಾಗುತ್ತದೆ. ನೂರಾರು ವರ್ಷಗಳ ಗುಲಾಮಗಿರಿ ನಮ್ಮ ಬದುಕಿನಲ್ಲಿ ಅಶಿಕ್ಷಣ, ಬಡತನ, ನಿರುದ್ಯೋಗ, ಸ್ವಾರ್ಥ, ಅಪ್ರಾಮಾಣಿಕತೆ ಭ್ರಷ್ಟಾಚಾರ, ಆತ್ಮಹೀನತೆ ಮೊದಲಾದ ಹಲವಾರು ದುರ್ಗುಣಗಳನ್ನು ತುಂಬಿದೆ. ನಾವು ನಮ್ಮ ಕನಸನ್ನು ನನಸಾಗಿಸಬೇಕಾದ್ದರೆ ಈ ದುರ್ಗುಣಗಳನ್ನು ದೂರಗೊಳಿಸಿ ಸಮಯದೊಂದಿಗೇ ಮುನ್ನಡೆಯಬೇಕು.

## ನಿಷ್ಕ್ರಿಯತೆಯಿಂದ ಹೊರ ಬನ್ನಿರಿ

ಪ್ರಸನ್ನ ಚಿತ್ತರಾದ ಜನರೇ ಹೆಚ್ಚು ಸುಖಿಗಳು. ಅದಕ್ಕೆ ಬದಲು ಸುಖೀ ಜೀವನದ ಕಲ್ಪನೆಯಲ್ಲೆ ಮುಳುಗಿರುವ ಜನ ಬದುಕಿನಲ್ಲಿ ಯಾವುದೇ ಜವಾಬ್ದಾರಿ ಹೊರಲು ಸಿದ್ಧರಿರದೆ ಹಾಗೆಯೇ ಉಳಿಯುತ್ತಾರೆ. ಅಂತಹವರು ಮಾನಸಿಕ ಯಾತನೆಯಿಂದ ನರಳುತ್ತಾರೆ. ಬದುಕಿನಲ್ಲಿ ಮಾಧುರ್ಯ ತುಂಬುವ ಇಚ್ಛೆ ನಿಮಗಿದ್ದರೆ ಆಲಸ್ಯ ಹಾಗೂ ನಿಷ್ಕ್ರಿಯತೆಯನ್ನು ತೊರೆದು ಬದುಕನ್ನು ಸಾಹಸಮಯ ಗೊಳಿಸಿರಿ. ಸಾಹಸಿಗರೇ ತಮ್ಮ ಜೀವನವನ್ನು ಗಂಡಾಂತರಕ್ಕೆ ಗುರಿಪಡಿಸಿ ಸಫಲರಾಗಿದ್ದಾರೆ.

ಜೀವನದಲ್ಲಿ ಸಫಲತೆ-ವಿಫಲತೆ, ಆಶೆ-ನಿರಾಶೆ, ಮಾನ-ಅಪಮಾನ, ಉನ್ನತಿ-ಅವನತಿ ಮೊದಲಾದ ದ್ವಂದ್ವಗಳು ಇದ್ದೇ ಇರುತ್ತವೆ. ಉತ್ತಮ ಫಲಕ್ಕೆ ನಮ್ಮ ಕಾರ್ಯಪದ್ಧತಿಯೇ ಕಾರಣ. ನಾವು ನಿರಾಶೆಯಿಂದ ಕೈಚೆಲ್ಲಿ ಕುಳಿತರೆ ಎಂದೂ ಸಫಲರಾಗುವಂತಿಲ್ಲ. ಅದಕ್ಕೆ ಬದಲು ಉತ್ಸಾಹದಿಂದ ಮುಂದರಿದರೆ ಖಂಡಿತ ವಿಜಯಿಗಳಾಗುವೆವು.

**ಪ್ರತಿಕ್ಷಣವನ್ನು ಸರಿಯಾಗಿ ಬಳಸಿರಿ :-** ನೀವು ಸಫಲರಾಗ ಬೇಕಿದ್ದರೆ ಸಂಘರ್ಷಮಯ ವ್ಯಕ್ತಿಗಳಂತೆ ಪ್ರತಿಯೊಂದು ಕ್ಷಣವನ್ನು ಸದುಪಯೋಗಿಸಿರಿ. ನಿಮ್ಮ ಅಮೂಲ್ಯ ವೇಳೆಯನ್ನು ಪೂರ್ತಿಯಾಗಿ ಬಳಸಿರಿ. ನಮ್ಮ ದೇಶದಲ್ಲಿ ರಜಾ ದಿನಗಳೇ ಹೆಚ್ಚು.



ಹೀಗಾಗಿ ಕೆಲಸದ ದಿನಗಳು ಕಡಿಮೆ. ಇದ್ದ ವೇಳೆಯನ್ನು ಸರಿಯಾಗಿ ಬಳಸದೆ ಹೋದರೆ ಸಫಲತೆ ಸಿಗುವುದೆಂತು ?

**ಬಿಡುವಿನ ವೇಳೆಯನ್ನು ಸೇವೆಯಲ್ಲಿ ತೊಡಗಿಸಿರಿ :-** ನೂರಾರು ವರ್ಷಗಳ ಗುಲಾಮಗಿರಿ ನಮ್ಮ ಸಮಾಜವನ್ನು ಹಲವಾರು ಅಭಿಶಾಪಗಳಿಗೆ ಗುರಿ ಮಾಡಿದೆ. ಆದ್ದರಿಂದ ನಮ್ಮ ಈ ದಲಿತ ಸಮಾಜದಲ್ಲಿ ಹೊಸ ಚೈತನ್ಯ ಮೂಡಿಸುವ ಅಗತ್ಯವಿದೆ. ನಿಮ್ಮ ಬಿಡುವೇಳೆಯನ್ನು ಈ ಕಾರ್ಯದಲ್ಲಿ ತೊಡಗಿಸಬಹುದು. ದೀನದಲಿತರಿಗೆ ಮಾಡುವ ಸಹಾಯವೇ ಜೀವನದಲ್ಲಿ ನಿಜವಾದ ಆನಂದ ತಂದು ಕೊಡುವುದು. ಒಮ್ಮೆ ನೆಪೋಲಿಯನ್ ತನ್ನ ಬದುಕಿನಲ್ಲಿ ವಾಸ್ತವಿಕ ಆನಂದದ ಐದು ದಿನಗಳೂ ಬಂದಿಲ್ಲ ಎಂದಿದ್ದ. ಮಹಾವಿಜೇತನಾಗಿ ಇಡೀ ವಿಶ್ವದಲ್ಲೇ ಪ್ರಶಂಸಿಸಲ್ಪಟ್ಟ ವ್ಯಕ್ತಿಯ ಉದ್ಗಾರವಿದು ! ಎಲ್ಲ ರೀತಿಯ ಸುಖ ಸೌಲಭ್ಯಗಳಿದ್ದು ನಿಜವಾದ ಸುಖಪಡೆಯದ ಜನರೇ ಈ ಪ್ರಪಂಚದಲ್ಲಿ ಹೆಚ್ಚು. ಇತರರಿಗೆ ಒಳಿತು ಮಾಡಿದರೇನೇ ನಿಜವಾದ ಸುಖ ಸಿಗುವುದೆಂದು ಇಂತಹರು ತಿಳಿದಿದ್ದರೆ ಚೆನ್ನಾಗುತ್ತಿತ್ತು.

ಜೀವನದ ಉನ್ನತಿ ಹಾಗೂ ಪ್ರಗತಿಗೆ ವಯಸ್ಸು ಬಾಧಕವಲ್ಲ. ಭಾರತದಲ್ಲಿ ೪೦-೪೫ ವರ್ಷ ವಯಸ್ಸಾಗುತ್ತಲೇ ತಾವು ಮುದುಕರಾದವೆಂದು ಜನ ಭಾವಿಸುತ್ತಾರೆ. ಆದರೆ ಪ್ರಪಂಚದಲ್ಲಿ ಪ್ರೌಢಾವಸ್ಥೆ ಹಾಗೂ ವೃದ್ಧಾವಸ್ಥೆಗೆ ತಲುಪಿದ ಎಷ್ಟೋಜನ ಬದುಕಿನ ಉನ್ನತ ಲಕ್ಷ್ಯವನ್ನು ತಲುಪಿ ಪ್ರಶಂಸಾಪಾತ್ರರಾಗಿದ್ದಾರೆ. ಸಫಲತೆ ಹಾಗೂ ಪ್ರಗತಿಯ ಹಾದಿಯಲ್ಲಿ ಮುಂದುವರಿಯುವ ಮನುಷ್ಯ ವಯಸ್ಸಿನ ಚಿಂತೆ ಹಚ್ಚಿಕೊಳ್ಳದೆ ಮುಂದೆ ಸಾಗುತ್ತಿರುತ್ತಾನೆ. ಆಚಾರ್ಯ ಪ್ರಫುಲ್ಲಚಂದ್ರರಾಯರ ಜೀವನ ಈ ವಿಷಯದಲ್ಲಿ ತುಂಬಾ ಪ್ರೇರಕವಾದುದು. ೬೦ ವರ್ಷ ದಾಟಿದ ಮೇಲೂ ಪ್ರದ-ರ್ಶನಿಗಳ ಉದ್ಘಾಟನೆ ಹಾಗೂ ರಾಷ್ಟ್ರೀಯ ಸಂಸ್ಥೆಗಳ ಮತ್ತು ಸ್ವದೇಶದ ಕೆಲಸಕ್ಕಾಗಿ ಸುಮಾರು ಎರಡು ಲಕ್ಷ ಮೈಲುಗಳ ಪ್ರವಾಸ ನಡೆಸಿದ್ದರು.

ಈ ಅವಧಿಯಲ್ಲಿ ಅವರು ತಮ್ಮ ವೈಜ್ಞಾನಿಕ ಶೋಧವನ್ನು ನಿಲ್ಲಿಸಲಿಲ್ಲ. ಜೀವನವನ್ನು ಸಾರ್ಥಕಗೊಳಿಸಲು ಇಂಥ ಮನೋಭಾವ ಅಗತ್ಯವಾಗಿದೆ. (ಹಿಂದಿಯಿಂದ)

---

ಅಯ್ಯ ನಿಮ್ಮನುಭಾವಿಗಳ ಸಂಗದಿಂದ ಎನ್ನ ತನು ಶುದ್ಧವಾಯಿತ್ತು. ಅಯ್ಯ.
ನಿಮ್ಮನುಭಾವಿಗಳ ಸಂಗದಿಂದ ಎನ್ನ ಮನ ಶುದ್ಧವಾಯಿತ್ತು ಅಯ್ಯ
ನಿಮ್ಮನುಭಾವಿಗಳೆನ್ನ ನೆರೆದೊರೆದು ಅಗು ಮಾಡಿದ ಕಾರಣ,
ಚೆನ್ನಮಲ್ಲಿಕಾರ್ಜುನ, ನಿಮಗಾನು ತೊಡಿಗೆಯಾದೆನು.

## ವಿಶ್ವದಲ್ಲಿ ಭಾರತೀಯ ಸಂಸ್ಕೃತಿ-೮.

❁ ಎಚ್. ಎಸ್. ನರಸಿಂಹಜೀಯರ್, ಲಕ್ಷ್ಮಯ್ಯಗಾರ್ಡನ್, 14ನೇ ಕ್ರಾಸ್, ಸೋಮೇಶ್ವರಪುರ ತುಮಕೂರು.

---

ವಿಶ್ವದ ಪ್ರಮುಖ ತತ್ವಜ್ಞಾನಿಗಳಲ್ಲೊಬ್ಬರೂ, ಮಹಾವಿದ್ವಾಂಸರೂ ಹಾಗೂ ನಮ್ಮ ರಾಷ್ಟ್ರದ ರಾಷ್ಟ್ರಾಧ್ಯಕ್ಷರಾಗಿದ್ದ ಡಾ|| ಸರ್ವಪಲ್ಲಿ ರಾಧಾಕೃಷ್ಣನ್‌ರವರು ಇಡೀ ವಿಶ್ವದ ಅನೇಕ ರಾಷ್ಟ್ರಗಳಲ್ಲಿ ಸಂಚರಿಸಿ, ಅಲ್ಲಿಯ ಜನ ಜೀವನ, ನಾಗರಿಕತೆ ಹಾಗೂ ಸಂಸ್ಕೃತಿಯ ಬಗ್ಗೆ ಆಳವಾದ ಪರಿಚಯ ಹೊಂದಿದವರು.

ಇವರು ಒಮ್ಮೆ ಇಂಡೋನೇಷಿಯಾ ರಾಷ್ಟ್ರಕ್ಕೆ, ಭಾರತದ ರಾಷ್ಟ್ರಪತಿಗಳಾಗಿದ್ದ ಸಂದರ್ಭದಲ್ಲಿ ಭೇಟಿಕೊಟ್ಟರು. ಅದು ಇಸ್ಲಾಂ ಧರ್ಮವನ್ನು ಅನುಸರಿಸುತ್ತಿರುವ ರಾಷ್ಟ್ರ. ಇವರನ್ನು ಸ್ವಾಗತಿಸುವ ಸಮಾರಂಭದಲ್ಲಿ ಕಾರ್ಯಕ್ರಮವನ್ನು ಗಣಪತಿ ಹಾಗೂ ಸರಸ್ವತಿ ಪ್ರಾರ್ಥನೆಯಿಂದ ಪ್ರಾರಂಭಿಸಲಾಯಿತು. ಸ್ವಾಗತಿಸಿದ ಸಂಸ್ಕೃತದ ಪ್ರಾಧ್ಯಾಪಕರನ್ನು (ಇವರು ಮುಸ್ಲಿಂ ಧರ್ಮದ ಅನುಯಾಯಿಗಳು) ಡಾ|| ರಾಧಾಕೃಷ್ಣ ರವರು ಈ ರೀತಿ ಪ್ರಶ್ನಿಸುತ್ತಾರೆ. What is this? you have started with the invocations to Sarawathi and Ganesha." ಇದಕ್ಕೆ ಉತ್ತರವಾಗಿ ಪ್ರಾಧ್ಯಾಪಕರು "Yes, that is our culture. Our faith may be somethings else. But our culture is the Indian culture and we still worship these things." ಎಂತಹ ಪ್ರಾಮಾಣಿಕ ಉತ್ತರವಿದು. ಭಾರತೀಯರೆಲ್ಲರೂ ಪುಳಕಿತ ಗೊಳ್ಳುವಂತಹ ವಿಚಾರ. ಮುಸ್ಲಿಂ ಧರ್ಮವನ್ನು ಅನುಸರಿಸುತ್ತಿದ್ದರೂ ಅವರೇ ಹೇಳುವಂತೆ, ಧರ್ಮಬೇರೆಯಾದರೂ ನಮ್ಮ ಸಂಸ್ಕೃತಿ ಭಾರತೀಯ ಸಂಸ್ಕೃತಿ, ಆದ್ದರಿಂದ ಈಗಲೂ ನಾವು ಅದನ್ನೇ ಅನುಸರಿಸುತ್ತಿದ್ದೇವೆ ಎಂದರು. ಈ ಸಂಸ್ಕೃತ ಪ್ರಾಧ್ಯಾಪಕರು 'Agastya in the Archipelago' ಎಂಬ ಪ್ರಬಂಧವನ್ನು ಅಗಸ್ತ್ಯ ಋಷಿಗಳ ಮೇಲೆ ಬರೆದಿದ್ದನ್ನು ನೋಡಿದ ಬಗ್ಗೆ ಡಾ|| ರಾಧಾಕೃಷ್ಣನ್‌ರವರು ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ. ಇಂಡೋನೇಷಿಯಾದಲ್ಲಿ ಬಹಳ ಜನ ಮೆಚ್ಚುಗೆ ಪಡೆದ ನಾಟಕ 'ಅರ್ಜುನ ವಿವಾಹ' ಎಂದೂ ತಿಳಿಸಿದ್ದಾರೆ. ಈ ಅನುಭವಗಳನ್ನೆಲ್ಲಾ ಅವರು ತಾವು ರಚಿಸಿರುವ 'Our heritage' ಎಂಬ ಗ್ರಂಥದಲ್ಲಿ ವಿವರಿಸಿದ್ದಾರೆ. ಅಲ್ಲಿಯವಿಮಾನ ಸಂಸ್ಥೆಗೆ 'ಗರುಡ' ಎಂದು ಹೆಸರಿಟ್ಟಿದ್ದಾರೆ. ಅವರ ಹೆಸರುಗಳಲ್ಲಿಯೂ ನಾವು ಭಾರತೀಯ ಮೂಲವನ್ನು ಕಾಣಬಹುದು. ಉ. ದಾ. ಸುಕರ್ಣ ಸುಹಾರ್ತೋ, ಮೇಘವತಿ ಮುಂತಾದವುಗಳು.



ಡಾ|| ರಾಧಾಕೃಷ್ಣನ್‌ರವರು ಕಾಂಬೋಡಿಯಾ ರಾಷ್ಟ್ರಕ್ಕೆ ಭೇಟಿಕೊಟ್ಟಾಗ ಅಲ್ಲಿಯ ದೊರೆ, ರಾಜಕುಮಾರ ಸಿಂಹನೌಕ್‌ರ ತಂದೆ ಈ ರೀತಿ ಸ್ವಾಗತಿಸಿದರು. We are your spritual descendants. A man called Kaundinya came from south India years ago, defeatd the combodian Princess, married her, settled down, established his dyanasty, and we are the spritual descendants of that dynasty. The name khmer civili-zation which you give to that comes from the word khmeru of which kaundinya was citizen here." ಇವರ ಸ್ವಾಗತ ಭಾಷಣದಿಂದಲೇ ನಮಗೆ ಕಾಂಬೋಡಿಯ ರಾಷ್ಟ್ರ ಭಾರತೀಯ ಸಂಸ್ಕೃತಿಯ ಮೂಲದ್ದು ಎಂದು ತಿಳಿದು ಬರುತ್ತೆ. ಕಾಂಬೋಡಿಯ ದೇಶದ ಮೊದಲ ಹೆಸರು ಕಾಂಭೋಜ, ಅಲ್ಲಿಯ ನದಿಯ ಹೆಸರು "ಮೆಕಾಂಗ್" ಇದು 'ಮಾಗಂಗಾ' ಮೂಲ ದಿಂದ ಬಂದದ್ದು. ಅಲ್ಲಿ ದೊರೆತಿರುವ ಅನೇಕ ಶಾಸನಗಳನ್ನು ಪಲ್ಲವರ ಕಾಲದ್ದೆಂದು ಗುರ್ತಿಸಿದ್ದಾರೆ. ಅವರಿಗೆ ವೇದ, ಪುರಾಣ, ರಾಮಾಯಣ ಮತ್ತು ಮಹಾಭಾರತಗಳ ಪರಿಚಯವಿತ್ತು. ಅಲ್ಲಿಯ ಜನರು ಶಿವ-ವಿಷ್ಣು ಆರಾಧಕರಾಗಿದ್ದರು. ಸಂಸ್ಕೃತ ಭಾಷೆಯೂ ಅಲ್ಲಿ ಪ್ರಚಲಿತವಿತ್ತೆಂದು ತಿಳಿದುಬರುತ್ತದೆ. ಶಾಸನಗಳಿಂದ ಅಲ್ಲಿಯ ಜನರು ಆಧ್ಯಾತ್ಮಿಕ ಪ್ರವರ್ತಕರಾಗಿದ್ದಾರೆಂದೂ, ಆಶ್ರಮಗಳಲ್ಲಿ ಆಚಾರ್ಯರು ನೆಲಸಿ ಮಾರ್ಗದರ್ಶನ ಮಾಡುತ್ತಿದ್ದರೆಂದೂ ತಿಳಿದಿದೆ. ಕಾಂಬೋಡಿಯ ದೇವಾಲಯಗಳೆಲ್ಲ ಭಾರತೀಯ ಪದ್ಧತಿಯಂತೆ ಕಟ್ಟಲ್ಪಟ್ಟಿವೆ. 12ನೆಯ ಶತಮಾನದಲ್ಲಿ ಅಲ್ಲಿಯ ದೊರೆ ಸೂರ್ಯವರ್ಮ ಕಟ್ಟಿಸಿದ ಕಟ್ಟಡಗಳಲ್ಲಿ ಭಾರತದ ಉತ್ತರ ಮತ್ತು ದಕ್ಷಿಣದ ಶೈಲಿ ಗಳನ್ನು ಕಾಣಬಹುದಾಗಿದೆ. ಅನೇಕ ದೇವಾಲಯಗಳು ಗುಪ್ತರ ಕಾಲದ ಕಟ್ಟಡಗಳ ಛಾಯೆಯನ್ನು ಹೊಂದಿವೆ.

ಕ್ರಿ.ಪೂ. 500 ವರ್ಷಗಳಿಗಿಂತ ಹಿಂದೆಯೇ ಈಜಿಪ್ಟ್ ದೇಶದಲ್ಲಿ "ಕೃಷ್ಣನ" ದೇವಾಲಯವಿತ್ತೆಂದು ಡಾ|| ರಾಧಾಕೃಷ್ಣನ್‌ರವರು ಹೇಳಿದ್ದಾರೆ. ವಿಶ್ವದ ನಾನಾ ಭಾಗಗಳಲ್ಲಿ ಸಂಚರಿಸಿದ ಇವರು ತಮ್ಮ ಅನುಭವವನ್ನು ಹೇಳುತ್ತಾ 'You find, wherver you go, a kind of cultural atmosphere which makes you feel at home. I have travelled in differ-ent parts of the world-in Africa in America South and North, in Asia, but there has not been a place in which I did not find myself absolutely at home"

ಎಂದಿದ್ದಾರೆ. ನಾನು ವಿಶ್ವದ ನಾನಾ ಭಾಗಗಳಲ್ಲಿ ಸಂಚರಿಸಿದ್ದೇನೆ. ಎಲ್ಲೆಲ್ಲಿಯೂ ಭಾರತೀಯ ಸಂಸ್ಕೃತಿಯ ಪ್ರಭಾವ ಕಂಡುಬಂದಿದೆ, ನಾನು ಎಲ್ಲಾ ಕಡೆಯೂ ಮನೆಯಲ್ಲಿದ್ದಂತಹ ವಾತಾವರಣವನ್ನೇ ಅನುಭವಿಸಿದೆ. ಹೊರಗಿನವನಂತೆ ನನಗೆ ಭಾಸವಾಗಲೇ ಇಲ್ಲ ಎಂಬುದು ಅವರ ಸ್ಪಷ್ಟ ಅಭಿಪ್ರಾಯ.

ಸಯಾಂ ದೇಶಕ್ಕೆ ನಮ್ಮ ಸಂಸ್ಕೃತಿಯ ಪ್ರಭಾವ ಹರಡಲು ಪ್ರಾರಂಭವಾದದ್ದು ಕ್ರಿ ಶ. ಮೊದಲನೆಯ ಶತಮಾನದಲ್ಲಿ. ಅಲ್ಲಿಯ ದೇವಾಲಯಗಳೆಲ್ಲಾ ಗುಪ್ತರ ಕಾಲದ ಶೈಲಿಯಲ್ಲಿವೆ. ಪಚಾಜಿನ್ ಹತ್ತಿರದಲ್ಲಿ ಶೈವ ಮತು ವೈಷ್ಣವ ದೇವಾಲಯಗಳು ದೊರೆತಿವೆ. ನಾಲ್ಕನೆಯ ಶತಮಾನದ ಸಂಸ್ಕೃತ ಶಾಸನಗಳೂ ಇಲ್ಲಿ ದೊರೆತಿವೆ. ಪುರಾತನ ಶೋಧನಾ ಕಾಲದಲ್ಲಿ ಇತ್ತೀಚೆಗೆ ಕ್ರಿ.ಶ. ಎರಡನೆಯ ಶತಮಾನದ್ದೆಂದು ಹೇಳಲಾದ ಬುದ್ಧನ ವಿಗ್ರಹವೂ ಪತ್ತೆಯಾಗಿದೆ. ದೇವಸ್ಥಾನದ ಒಂದು ಘಂಟೆಯ ಮೇಲೆ ಸಂಸ್ಕೃತ ಹಾಗೂ ಚೀನೀ ಭಾಷೆ ಇರುವುದು ಗೊತ್ತಾಗಿದೆ. ಅಲ್ಲಿಯ ದೊರೆಯನ್ನು ಮಹಾರಾಜ ಎಂದು ಕರೆಯಲಾಗುತ್ತಿತ್ತು. ಇವರಿಗೋಸ್ಕರವಾಗಿ ಕಟ್ಟಿರುವ ದೇವಾಲಯಗಳಲ್ಲಿ ರಾಮಾಯಣದ ಉಪಾಖ್ಯಾನಗಳ ಚಿತ್ರಗಳು ಕಂಡು ಬಂದಿವೆ. ಈ ಎಲ್ಲಾ ಸಂಶೋಧನೆಗಳಿಂದ ಅಲ್ಲಿಯ ಜನ ಜೀವನದಲ್ಲಿ ಭಾರತೀಯ ಸಂಸ್ಕೃತಿ ಮಿಳಿತವಾಗಿತ್ತು ಎಂಬದು ಖಚಿತವಾಗಿ ಗೊತ್ತಾಗುತ್ತದೆ.

ಮಲಯ ದ್ವೀಪಗಳಲ್ಲಿರುವ ಭಾರತೀಯರನ್ನು ಓರಂಗ್ ಕ್ಲಿಂಗ್ ಎಂದು ಕರೆಯುತ್ತಿದ್ದಾರೆ. ಏಕೆಂದರೆ ಇವರೆಲ್ಲಾ ಕಳಿಂಗ (ಈಗಿನ ಒರಿಸ್ಸಾ) ದೇಶದಿಂದ ಬಂದವರು. ಕ್ರಿ ಶ. ಮೂರನೆಯ ಶತಮಾನದಲ್ಲಿಯೇ ಇಲ್ಲಿ ಭಾರತೀಯ ಸಂಸ್ಕೃತಿ ಪ್ರಸರಿಸಿದ್ದ ಬಗ್ಗೆ ದಾಖಲೆಗಳಿವೆ. ಜಾವಾ ಮತ್ತು ಸುಮಾತ್ರ ದ್ವೀಪಗಳಲ್ಲಿಯೂ ಭಾರತೀಯ ಸಂಸ್ಕೃತಿ ಹರಡಿರುವ ಬಗ್ಗೆ ಸಾಕಷ್ಟು ಪುರಾವೆಗಳು ದೊರೆತಿವೆ. ಕ್ರಿ.ಶ. ಮೊದಲನೆಯ ಶತಮಾನದಲ್ಲಿಯೇ ಕಳಿಂಗ ದೇಶದಿಂದ ಬಂದ ದೊರೆಗಳು ಈ ದ್ವೀಪಗಳನ್ನು ಆಳುತ್ತಿದ್ದರು. 4ನೆಯ ಶತಮಾನದಲ್ಲಿ ಇಲ್ಲಿಗೆ ಭೇಟಿಕೊಟ್ಟ ಚೀನಾ ದೇಶದ ಯಾತ್ರಿಕ ಫಾಹಿಯಾನ್ ಇಲ್ಲಿ ಭಾರತೀಯರು (ಬ್ರಾಹ್ಮಣರು) ವಾಸವಾಗಿದ್ದರೆಂದು ದಾಖಲಿಸಿದ್ದಾನೆ. ಕಾಶ್ಮೀರದ ರಾಜ ಗುಣವರ್ಮನು ಇಲ್ಲಿಯ ರಾಣಿಯನ್ನು ಬೌದ್ಧಮತಾವಲಂಬಿಯನ್ನಾಗಿ ಮಾಡಿದ ನಂತರ ಜಾವಾದಲ್ಲಿ ಬೌದ್ಧ ಮತ ಪ್ರಚಾರ ಪ್ರಾರಂಭವಾಯಿತು. ಈಗಲೂ ಸಹ ಜಾವಾದ ಕಲೆ, ಭಾಷೆ, ಸಾಹಿತ್ಯ, ರಾಜಕೀಯ ಮತ್ತು ಸಾಮಾಜಿಕ ವ್ಯವಸ್ಥೆಗಳಲ್ಲಿ ಭಾರತೀಯತೆ ಕಂಡು ಬರುತ್ತಿದೆ. ರಾಮಾಯಣ, ಮಹಾಭಾರತಗಳ ಭಾಗಗಳನ್ನು ನಾಟಕೀಕರಿಸಿ ಪ್ರದರ್ಶಿಸಿದ ಬಗ್ಗೆ ದಾಖಲೆಗಳಿವೆ. ಜಾವಾ ಭಾಷೆಯಲ್ಲಿ ರಚಿತವಾಗಿರುವ ಭಾರತೀಯ ಸಂಸ್ಕೃತಿಯ ಉದ್ಗ್ರಂಥಗಳು ಈಗಲೂ ಲಭ್ಯವಿವೆ.



ಪ್ರಾಚೀನ ಜಾವನ್ನರು ಶಿವನ ಆರಾಧಕರು. ಅಲ್ಲದೆ ಶಕ್ತಿದೇವತೆಯನ್ನೂ ಪೂಜಿಸುತ್ತಿದ್ದರು. ಇಲ್ಲಿ ಗಣಪತಿ, ಕಾರ್ತಿಕೇಯ ಹಾಗೂ ವಿಷ್ಣು ಮತ್ತು ಈತನ ದಶಾವತಾರಗಳ ವಿಗ್ರಹಗಳು ದೊರೆತಿವೆ. ಇಲ್ಲಿ ಈಚೆಗೆ ಬೌದ್ಧಮತದ ಮಹಾಯಾನ ಪದ್ಧತಿ ಹೆಚ್ಚು ಪ್ರಚಾರಕ್ಕೆ ಬಂದಿತು. ಬಂಗಾಳ ದೇಶದಿಂದ ಬಂದ ಬೌದ್ಧಭಿಕ್ಷುಗಳ ಪ್ರಚಾರ ಮೊದಲು ಪ್ರಾರಂಭವಾಯಿತು.

ಸುಮಾತ್ರಾ ದ್ವೀಪದ ಮೊದಲ ಹೆಸರು ಶ್ರೀ ವಿಜಯ. ಹೆಸರೇ ಸೂಚಿಸುವಂತೆ ಇದು ಭಾರತೀಯ ಪರಂಪರೆಯ ನಾಡು. ಬೌದ್ಧ ಮತ ಹರಡಿದ ನಂತರ ಸಾವಿರಾರು ಬೌದ್ಧ ಭಿಕ್ಷುಗಳು ಬಂದು ನೆಲೆಸಿದರು. ಬಂಗಾಳಾದ ಅಂದಿನ ವಿಕ್ರಮಶೀಲ ವಿಶ್ವವಿದ್ಯಾಲಯ (ಯೂನಿವರ್ಸಿಟಿ) ದಿಂದ ಆಗಿನ ಕುಲಪತಿಗಳಾಗಿದ್ದ ಶ್ರೀ ಜ್ಞಾನ ದೀಪಂಕರ್‌ರವರು ಇಲ್ಲಿಗೆ ಭೇಟಿಕೊಟ್ಟ ಬಗ್ಗೆ ದಾಖಲೆಗಳಿವೆ. ಹಿಂದಿನ ವಿಶ್ವ ವಿಖ್ಯಾತ 'ನಳಂದ' ವಿಶ್ವವಿದ್ಯಾಲಯದ ಕುಲಪತಿಳಾಗಿದ್ದ ಶ್ರೀ ಧರ್ಮಪಾಲರು ತಮ್ಮ ಅಂತ್ಯಕಾಲದಲ್ಲಿ ಸುಮಾತ್ರ ದ್ವೀಪದಲ್ಲಿದ್ದರೆಂದು ತಿಳಿದು ಬಂದಿದೆ. ಈ ಸುಮಾತ್ರ (ಶ್ರೀ ವಿಜಯ) ಆಗ ಪೂರ್ವದೇಶಗಳಿಗೆಲ್ಲಾ ಬೌದ್ಧ ಮತ ಪ್ರಸಾರಕ್ಕೆ ಪ್ರಧಾನ ಕೇಂದ್ರವೆಂದು ಪರಿಗಣಿಸಲ್ಪಟ್ಟಿತ್ತು.

ಹೀಗೆ ವಿಶ್ವದ ನಾನಾ ರಾಷ್ಟ್ರಗಳ ಜನರು ಬಹಳ ಹಿಂದಿನ ಕಾಲದಿಂದಲೂ ಭಾರತೀಯ ಸಂಸ್ಕೃತಿಯ ಪ್ರಭಾವಕ್ಕೆ ಮಾರುಹೋಗಿ ಭಾರತೀಯತೆಯನ್ನು ತಮ್ಮಲ್ಲಿ ಮೂಡಿಸಿಕೊಂಡು ಭಾರತವನ್ನು ಮಾತೃಸ್ಥಾನದಲ್ಲಿರಿಸಿ ಕೊಂಡಿದ್ದರು.

ಲಿಂಗವೆಂಬುದು ಪರಶಿವಶಕ್ತಿಯ ನಿಜವಾಸ. ಲಿಂಗವೆಂಬುದು ಪರಶಿವನ ಪರಮಜ್ಞಾನತೇಜ. ಲಿಂಗವೆಂಬುದು ಅಖಂಡ ಸ್ವರೂಪ. ಲಿಂಗವೆಂಬುದು ಹರಿ ಬ್ರಹ್ಮರ ನಡುವೆ ನೆಗಳ್ದ ಜ್ಯೋತಿರ್ಲಿಂಗ. ಲಿಂಗವೆಂಬುದು ಚರಾಚರ ಲಯಗಮನಸ್ಥಾನ. ಲಿಂಗವೆಂಬುದು ಪಂಚಸಂಜ್ಞೆಯನುಳ್ಳುದು. ಅದೆಂತೆಂದೊಡೆ : "ಜ್ವಾಲಾಮಾಲಾವೃತಂ" ಜ್ವಲನಸ್ತಂಭರೂಪಿಣೇ । ನಮಃ ಶಿವಾಯ ಶಾಂತಾಯ ಬ್ರಹ್ಮಣೇ ಲಿಂಗಮೂರ್ತಯೇ ॥ ಲೀಯತೇ ಗಮ್ಯತೇ ಯತ್ರ ಯೇನ ಸರ್ವಂ ಚರಾಚರಂ । ತದೇತಲ್ಲಿಂಗ ಮಿತ್ಯುಕ್ತಂಲಿಂಗತತ್ವೆ ಪರಾಯಣೈಃ ಪರಂ ಗೂಢಂ ಶರೀರಸ್ಥಂ ಲಿಂಗ ಕ್ಷೇತ್ರಮನಾದಿಮತ್ । ಯಥಾ ದಿವ್ಯಮೀಶ್ವರ ತೇಜಂ । ತಲ್ಲಿಂಗಂ ಪಂಚ ಸಂಜಿಕಂ । ಎಂಬುದಾಗಿ, ಇದು ಲಿಂಗದ ಮರ್ಮ. ಈ ಲಿಂಗವನರಿದಾತನೇ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರ.

# ಶಿಕ್ಷಕ ಮತ್ತು ಅವನ ಕರ್ತವ್ಯಗಳು

❁ ಹೆಚ್. ಗವಿಸಿದ್ದಯ್ಯ, ಶಿಕ್ಷಕರು ಗ್ರಾ. ಪ್ರೌಢಶಾಲೆ, ಆವತಿ, ದೇವನಹಳ್ಳಿ ತಾ॥ ಬೆಂ. ಜಿಲ್ಲೆ.

'ಶಿಕ್ಷಣ' ಎಂದರೆ 'ಶಿಸ್ತು, 'ಕ್ಷಮಾಗುಣ' ಮತ್ತು 'ಕರುಣೆ' ಎನ್ನುವ ಗುಣಗಳನ್ನು ಹೊಂದಿರುವವನು ಎಂಡರ್ಥ. ಮಕ್ಕಳಿಗೆ ಮಾದರಿಯಾಗಿ, ಸಂಯಮ ಶೀಲನಾಗಿ ಹೆಚ್ಚು ಹೆಚ್ಚು ವಿಷಯಗಳನ್ನು ತಿಳಿದುಕೊಳ್ಳುವ ಆಸಕ್ತಿಯುಳ್ಳ ಮನೋ ಪ್ರವೃತ್ತಿಯುಳ್ಳವನೇ 'ಶಿಕ್ಷಕ' ಸ್ಥಾನಕ್ಕೆ ಅರ್ಹನಾದವನು ಎನ್ನಬಹುದು. ವಿದ್ಯಾರ್ಥಿಗಳು ಮತ್ತು ಪೋಷಕರ ಮಧ್ಯೆ ಸೇತು ಬಂಧವಾಗಿದ್ದು; ಸಂಪನ್ಮೂಲ ವ್ಯಕ್ತಿಯಾಗಿ ಜ್ಞಾನ ಭಂಡಾರದಂತಿರ ಬೇಕು; ಶಿಕ್ಷಕನಾದವನು. ನಿರಾಶೆಯನ್ನು ನೀಗಿ ಆಶಾಭಾವನೆಯನ್ನು ಬೆಳೆಸಿಕೊಂಡು ಸಮಯಕ್ಕೆ ತಕ್ಕಂತೆ ಹೊಂದಿಕೊಳ್ಳುವ ಗುಣವನ್ನು ಶಿಕ್ಷಕನಾದವನು ಬೆಳಸಿಕೊಳ್ಳ ಬೇಕು.

ನಾಯಕನ ಧೈರ್ಯ, ಸರ್ಪದ ಬುದ್ಧಿವಂತಿಕೆ, ಪಾರಿವಾಳದ ಮೃದುತ್ವ, ಹಿಡಿದ ಕೆಲಸವನ್ನು ಸಾಧಿಸುವ ಛಲ ಮುಂತಾದ ಗುಣಗಳನ್ನು ಸಹ ಶಿಕ್ಷಕ ಬೆಳಸಿಕೊಳ್ಳಬೇಕು. ನಮ್ಮ ಸಮಾಜದಲ್ಲಿ ಮೊದಲಿನಿಂದಲೂ ಶಿಕ್ಷಕನಿಗೆ ವಿಶೇಷವಾದ ಗೌರವಾಧಾರಗಳಿವೆ.

ಒಂದಕ್ಷರವನ್ನು ಕಲಿಸಿದ ಗುರುವನ್ನು ನಮ್ಮ ಜೀವಿತಕಾಲದ ಪೂರ್ತಿ ತಂದೆಯಂತೆ ಕಾಣಬೇಕೆನ್ನುವ ಮಾತು ಬಹಳ ಹಿಂದಿನಿಂದಲೂ ನಮ್ಮಲ್ಲಿ ಬೆಳೆದು ಬಂದಿದೆ.

ಇನ್ನು ಬೋಧನಾವೃತ್ತಿಯೊಂದು ಶ್ರೇಷ್ಠವಾದವೃತ್ತಿ. ಆದಕಾರಣ ಶಿಕ್ಷಕನಾದವನು ಒಳ್ಳೆಯ ಗುಣಗಳನ್ನು ಬೆಳಸಿಕೊಂಡು ಪ್ರತಿ ವಿಶಯದಲ್ಲೂ ಮಕ್ಕಳಿಗೆ ಮಾದರಿಯಾಗಿರಬೇಕು. ಮಕ್ಕಳು ತನ್ನನ್ನು ಪ್ರತಿ ವಿಷಯದಲ್ಲೂ ಅನುಕರಣೆ ಮಾಡುತ್ತಾರೆ. ಅವರಿಗೆ ನಾನು ಎಲ್ಲಾ ವಿಧದಲ್ಲಿ ಮಾದರಿಯಾಗಿರಬೇಕು ಎನ್ನುವುದನ್ನು ಆತ ಅರಿತಿರಬೇಕು.

ವಿದ್ಯಾರ್ಥಿಗಳಿಗೆ ಸ್ನೇಹಿತನಾಗಿ ಅವರುಮಾಡುವ ತಪ್ಪುಗಳನ್ನು ಒಳ್ಳೆಯಮಾತುಗಳಿಂದ ತಿದ್ದಬೇಕು. ತನ್ಮೂಲಕ ಓದುವ ಹವ್ಯಾಸವನ್ನು ಅವರಲ್ಲಿ ಬೆಳಸಬೇಕು. ಮಕ್ಕಳಲ್ಲಿ ಹುದುಗಿರುವ ಪ್ರತಿಭೆಗಳನ್ನು ಗುರುತಿಸಿ ಅವನ್ನು ಅಭಿವೃದ್ಧಿ ಪಡಿಸಿಕೊಳ್ಳುವ ಸದವಕಾಶವನ್ನು ಶಿಕ್ಷಕನಾದವನು ಒದಗಿಸಿಕೊಡಬೇಕು.



"ಶಿಕ್ಷಣದಿಂದ ಮಾತ್ರ ನಾವು ನಮ್ಮಲ್ಲಿರುವ ಅಲ್ಪಜ್ಞಾನದ ಬಗ್ಗೆ ಅತೃಪ್ತಿ ಹೊಂದುತ್ತೇವೆ. ಬೋಧನೆಯಿಂದ ಮಾತ್ರ ನಾವು ನಮ್ಮ ಸಂಪೂರ್ಣವಲ್ಲದ ಜ್ಞಾನದ ಬಗ್ಗೆ ಅರಿವು ಮೂಡಬಲ್ಲದು ಎಂದು ಸುಮಾರು 2,400 ವರ್ಷಗಳ ಹಿಂದೆಯೇ ಚೈನಾದೇಶದ ಮುತ್ಸದ್ದಿ ಕನ್‌ಪೂಸಿಯಸ್ ಹೇಳಿರುವ ಮಾತು ಈಗಲೂ ಸಹ ಎಷ್ಟು ಸಮಂಜಸ ಎನಿಸಿದೆ.

## ಸಮಾಜದ ಅಭಿವೃದ್ಧಿಯಲ್ಲಿ ಶಿಕ್ಷಕನ ಪಾತ್ರ :-

ಸಮಾಜದಲ್ಲಿ ಎಷ್ಟೇ ಲೋಪದೋಷಗಳಿದ್ದರೂ; ಆದನ್ನು ತಿದ್ದಿ ಒಳ್ಳೆಯ ಮಾರ್ಗದರ್ಶನ ನೀಡುವ ಗುರುತರವಾದ ಹೊಣೆ ಇಂದು ಶಿಕ್ಷಕನ ಮೇಲಿದೆ. 'The teacher can move the mountain' ಎನ್ನುವಂತೆ ಶಿಕ್ಷಕನಾದವನು ಮಕ್ಕಳಿಗೆ ಒಳ್ಳೆಯ ಶಿಕ್ಷಣವನ್ನು ನೀಡುವುದರ ಮೂಲಕ ಅವರ ಬಾಳಿನ 'ರೂವಾರಿ'ಯಾಗಬೇಕು.

ಎಲ್ಲೆಲ್ಲೂ ಸ್ವಾರ್ಥ. ಲಂಚಕೋರತನ; ಸ್ವಜನ ಪಕ್ಷಪಾತ ತುಂಬಿರುವ ಈ ಸಮಾಜದಲ್ಲಿಂದು ಉಸಿರುಗಟ್ಟಿಸುವ ವಾತಾವರಣ ನಿರ್ಮಾಣವಾಗುತ್ತಿದೆ. ಇಂತಹ ಅನಿಷ್ಟಗಳನ್ನೆಲ ಬೇರು ಸಹಿತ ಕಿತ್ತೊಗೆದು, ಹೊಸ ಸಮಾಜವನ್ನು ಸೃಷ್ಠಿಸಬೇಕಾಗಿದೆ. ಅಂತಹ ಗುರುತರವಾದ ಹೊಣೆ 'ಇಂದು ಶಿಕ್ಷಕರ ಮೇಲಿದೆ' ಎಂದರೆ ತಪ್ಪಾಗಲಾರದು. ನಾಳಿನ ಭವ್ಯ ಭಾರತವನ್ನು ನಿರ್ಮಾಣ ಮಾಡುವ ಇಂದಿನ ಮಕ್ಕಳಿಗೆ ಅಂದರೆ ನಾಳಿನ ಭವ್ಯ ಭಾರತವನ್ನು ನಿರ್ಮಾಣ ಮಾಡುವ ಇಂದಿನ ಮಕ್ಕಳಿಗೆ ಒಳ್ಳೆಯ ಶಿಕ್ಷಣ ನೀಡಿ ಅವರಲ್ಲಿ ಶಿಸ್ತು, ಸಂಯಮ, ಕರ್ತವ್ಯಪ್ರಜ್ಞೆ ಅನುಕಂಪ ಮುಂತಾದ ಗುಣಗಳನ್ನು ಬೆಳಸಿಕೊಳ್ಳುವಂತೆ ಮಾಡಬೇಕು. ತನ್ಮೂಲಕ ದೇಶದ ಪ್ರಗತಿಗೆ ನಾಂದಿ ಹಾಡಬೇಕು. ಸಮಾಜದ ಅಭಿವೃದ್ಧಿಯ ವಾಹಿನಿಯಲ್ಲಿ ಒಂದಾಗಬೇಕು.



## ಪರಿಸರ ಶಿಕ್ಷಣ ಅಗತ್ಯ

-ಕೃಪೆ: ವಿಜ್ಞಾನ ಸಂಗಾತಿ

ಇಂದು ನಮ್ಮ ಮಕ್ಕಳ ಪಠ್ಯಗಳಲ್ಲಿ ಏನೆಲ್ಲಾ ಇದೆ. ಉಪಗ್ರಹದಿಂದ ಹಿಡಿದು
ಅರ್ಥಶಾಸ್ತ್ರದ ವರೆಗೆ ಅವರ ಕಲಿಕೆಯವ್ಯಾಪ್ತಿ ಇದೆ. ಎರಡನೇ ಅಥವಾ ಮೂರನೇ
ತರಗತಿಯಿಂದಲೇ ನಮ್ಮ ಮಕ್ಕಳು ಕಂಪ್ಯೂಟರ್ ಮೇಲೆ ಬೆರಳಾಡಿಸಲು ತೊಡಗುತ್ತಾರೆ.
ಆದರಲ್ಲೂ ವಿಜ್ಞಾನ ಹಾಗೂ ಗಣಿತವನ್ನು ಹುಟ್ಟುತ್ತಲೇ ಅರೆದು ಕುಡಿಯಬೇಕೆಂಬ
ಮಹಾತ್ವಾಕಾಂಕ್ಷೆ ಪಠ್ಯ ಪುಸ್ತಕ ತಜ್ಞರಿಂದ ಹಿಡಿದು ಹೆತ್ತವರವರೆಗೂ ಎಲ್ಲರಿಗೂ
ಇದೆ. ಇಷ್ಟೆಲ್ಲಾ ಕಲಿಸುವ ನಾವು ಪರಿಸರದ ಬಗ್ಗೆ ನಮ್ಮ ಮಕ್ಕಳಿಗೆ ಹೇಳಿಕೊಡುವುದು
ತೀರಾಕಡಿಮೆ. ಹೊಗೆ ಉಗುಳುವ ವಾಹನಗಳು, ಕಾರ್ಖಾನೆಗಳು, ನದಿನೀರು ಕೊಚ್ಚೆ
ಯಾಗುವುದು ಇದಿಷ್ಟು ಮಾತ್ರ ಪರಿಸರ ಮಾಲಿನ್ಯ ಎಂಬ ಭ್ರಮೆಬರುವಂತೆಯೇ
ಮಕ್ಕಳಿಗೆ ಬೋಧಿಸುತ್ತಿದ್ದೇವೆ. ಇದರ ಬಗ್ಗೆಯೇ ಒಂದು ಪ್ರಬಂಧ ಸ್ಪರ್ಧೆಯನ್ನೋ,
ಚರ್ಚಾಸ್ಪರ್ಧೆಯನ್ನೋ ಏರ್ಪಡಿಸುವಷ್ಟಕ್ಕೆ ನಮ್ಮ ಪರಿಸರ ಶಿಕ್ಷಣದ ವ್ಯಾಪ್ತಿ ಮುಗಿಯು
ತ್ತಿದೆ. ಈ ಬಗೆಯ ಶಾಸ್ತ್ರಾಚಾರಕ್ಕೆ ಹೇಳಿಕೊಡುವ ಪರಿಸರಶಿಕ್ಷಣದಿಂದ ನಮ್ಮ ಮಕ್ಕಳಿಗೆ
ಪರಿಸರದ ಬಗ್ಗೆ ಜಾಗೃತಿ ಉಂಟಾಗುವುದು ಸಾಧ್ಯವೆ ಇಲ್ಲ.

ವಿಜ್ಞಾನ ಗಣಿತವನ್ನು ಕಲಿಸುವಷ್ಟೇ ಗಂಭೀರವಾಗಿ ಪರಿಸರ ಶಿಕ್ಷಣವನ್ನು ಇಂದು
ನಾವು ಮಕ್ಕಳಿಗೆ ನೀಡಬೇಕಾಗಿದೆ. ಅಲ್ಲದೆ, ಹೊಗೆ ಬಿಡುವುದು, ನೀರು ರಾಡಿಯೆಬ್ಬಿ
ಸುವುದು ಇಷ್ಟು ಮಾತ್ರ ಪರಿಸರ ನಾಶ ಎಂಬ ಭ್ರಮೆಯಲ್ಲಿರುವ ಮಕ್ಕಳಿಗೆ ಈಭೂಮಿಯ
ಮೇಲಣ ಜೀವ ಜೀವಗಳ ನಡುವಣ ಸೂಕ್ಷ್ಮ ಸಂಬಂಧವನ್ನು ಕುರಿತು ಮಾಹಿತಿ, ಒಂದು
ಇನ್ನೊಂದನ್ನು ಅವಲಂಬಿಸಿ, ಅನುಸರಿಸಿ ಬದುಕುತ್ತಿರುವ ಕಾರಣದಿಂದ ಸಾಧಿಸಿರುವ
ತಾದಾತ್ಮ್ಯ ಈ ಕುರಿತು ತಿಳುವಳಿಕೆಯನ್ನು ಅತ್ಯವಶ್ಯಕವಾಗಿ ನೀಡಬೇಕಾಗಿದೆ.

ಜನಸಂಖ್ಯೆ ಏರಿಕೆ, ಕೈಗಾರಿಕೀಕರಣ ಇದರಿಂದ ಮಾನವ ಮಾಡುತ್ತಿರುವ ಅರಣ್ಯ
ನಾಶ, ಈ ಅರಣ್ಯ ನಾಶದಿಂದಾಗಿ ಜೀವವಾಸಕ್ಕೆ ಉಂಟಾಗಿರುವ ಧಕ್ಕೆ ಇದರ ಬಗ್ಗೆ
ನಮ್ಮ ಮಕ್ಕಳಿಗೆ ಶಿಕ್ಷಣ ನೀಡುವುದು ಅಗತ್ಯ. ಕಾಡನ್ನು ಕಡಿಯುವ ಮನುಷ್ಯ ಅದರ
ಬದಲಿಗೆ ಕೃಷಿ ಹೆಸರಿನಲ್ಲಿ ಯಾವುದೇ ಒಂದು ಬೆಳೆಯನ್ನು ಬೆಳೆದರೂ ಮೊದಲಿದ್ದ
ಜೀವವೈವಿಧ್ಯ ನಾಶವಾಗಿ ಪರಿಸರ ಸರಳೀಕರಣವಾಗಿ ಪರಿಸರ ಅಸಮತೋಲನವಾಗುತ್ತ
ದೆಂಬ ಜ್ಞಾನವನ್ನು ಮಕ್ಕಳಿಗೆ ನಾವು ಖಂಡಿತಾ ನೀಡುತ್ತಿಲ್ಲ. ಮುಖ್ಯವಾಗಿ ಮನುಷ್ಯ
ಕೂಡಾ ಈ ಜೀವಾವಾಸದ ಭಾಗವೇ ಹೊರತು ನಿಸರ್ಗದ ಮೇಲೆ ದರ್ಪ ತೋರಿಸುವ
ಹಕ್ಕುಳ್ಳ ಸರ್ವಾಧಿಕಾರಿಯಲ್ಲ ಎಂಬ ಪ್ರಜ್ಞೆ ಮೂಡಿಸುವುದು ಅಗತ್ಯ.

ಒಂದು ಊರಿನಲ್ಲಿ ಒಂದು ಮಗುವಿನ ಪ್ರಾಕ್ಷಾಳನಕ್ಕೆ ನಾವು ಬಳಸುವಷ್ಟು ನೀರು ಒಂದು
ಆಲದ ಮರಕ್ಕೆ ಸಾಕಾಗುತ್ತದೆ ಎಂದು ಒಬ್ಬ ವಿಜ್ಞಾನಿ, ಲೇಕಖರು ಅಭಿಪ್ರಾಯ ಪಡುತ್ತಾರೆ.
ಈ ಬಗೆಯ ದುಂದುಗಾರಿಕೆಯಿಂದ ಆಗುವ ಭೌತ ಪರಿಸರದ ವಿನಾಶ, ಮನುಕುಲ ಈ ವಿನಾಶಕ್ಕೆ
ತೆರ ಬೇಕಾದ ಬೆಲೆ, ಈ ಎಲ್ಲವನ್ನು ನಾವು ಮಕ್ಕಳಿಗೆ ಇಂದು ಮನದಟ್ಟು ಮಾಡಿಕೊಡುವುದು
ತೀರಾ ಅಗತ್ಯವಾಗಿದೆ.

ಸೌಜನ್ಯ : ಬಿತ್ತರ ಮಾಹಿತಿ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ ಹಂಪಿ ವಿದ್ಯಾರಣ್ಯ ಕಮಲಾಪುರ.

## ಸ್ವಾತಂತ್ರ್ಯದಿಂದ ಸ್ವಾವಲಂಬನೆಯತ್ತ
## 50 ನೇಸ್ವಾತಂತ್ರ್ಯೋತ್ಸವ

ರಾಷ್ಟ್ರಪಿತ ಮಹಾತ್ಮಾ ಗಾಂಧಿಯವರು ಪೂರ್ಣ ಸ್ವರಾಜ್ಯಕ್ಕೆ ಕರೆ
ನೀಡಿದಾಗ ಅವರ ಉದ್ದೇಶವನ್ನು ಈಡೇರಿಸಲು ಇಡೀ ದೇಶ ಒಗ್ಗಟ್ಟಾಗಿ
ಎದ್ದು ನಿಂತಿತು. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಕರ್ನಾಟಕವೂ ಮಹ
ತ್ವದ ಪಾತ್ರ ವಹಿಸಿದೆ. 1857ರ ಮೊದಲ ಸ್ವಾತಂತ್ರ್ಯ ಹೋರಾಟಕ್ಕೆ
ಬಹಳ ಮುಂಚಿತವಾಗಿಯೇ ಈ ರಾಜ್ಯದಲ್ಲಿ ದಂಗೆಯ ಕಹಳೆ ಮತ್ತು
ಧ್ವಜ ಮೊಳಗಿತ್ತು. ದಶಕಗಳ ಹಿಂದೆಯೇ ಕಿತ್ತೂರಿನ ರಾಣಿ ಚನ್ನಮ್ಮ
ವಿದೇಶೀ ಅಳ್ವಿಕೆಯ ವಿರುದ್ಧ ಬಂಡೆದ್ದಿದ್ದಳು. ಸಂಪದ್ಭರಿತ ಸ್ವತಂತ್ರ
ದೇಶ ಸ್ವಾತಂತ್ರ್ಯ ಹೋರಾಟಗಾರರ ನಿಸ್ವಾರ್ಥ ಬಲಿದಾನದ ಉದ್ದೇಶ.
ತಮ್ಮ ಮಕ್ಕಳಾದರೂ ಸ್ವಚ್ಛವಾದ ಸ್ವಾತಂತ್ರ್ಯದ ಗಾಳಿಯನ್ನು ಸೇವಿ
ಸಲಿ ಎಂಬುದು ಅವರ ಕನಸಾಗಿತ್ತು. ಸುಭದ್ರ ಭಾರತ ನಿರ್ಮಾಣವು
ಅವರ ಗುರಿಯಾಗಿತ್ತು. ಸ್ವಾತಂತ್ರ್ಯದ ಸುವರ್ಣ ಮಹೋತ್ಸವದ ಈ
ದಿನದಂದು ಕರ್ನಾಟಕ ಸ್ವಾತಂತ್ರ್ಯ ಸಂಗ್ರಾಮದ ಸೇನಾನಿಗಳಿಗೆ ವಂದಿ
ಸುತ್ತದೆ. ಕರ್ನಾಟಕ ನಮ್ಮ ರಾಷ್ಟ್ರ ಪಿತಾಮಹರ ಆದರ್ಶಗಳನ್ನು ಅನು
ಸರಿಸಿ ಜಾತ್ಯತೀತತೆ ರಾಷ್ಟ್ರೀಯತೆ ಮತ್ತು ಸರ್ವರ ಕಲ್ಯಾಣ ಸಾಗಿಸುವ
ಮೂಲಕ ಮಾದರಿ ರಾಜ್ಯವೆನಿಸಿದೆ.

ಕರ್ನಾಟಕ ಆರ್ಥಿಕ ಉದಾರೀಕರಣದ ಮುಂಚೂಣಿಯಲ್ಲಿದ್ದು, ಶ್ರೀ
ಜೆ.ಎಚ್. ಪಟೇಲರ ಸಮರ್ಥ ಮಾರ್ಗದರ್ಶನದಲ್ಲಿ ಸರ್ವತೋಮುಖ
ಪ್ರಗತಿ ಸಾಧಿಸುತ್ತಿದ್ದು ಮಾದರಿ ರಾಜ್ಯವಾಗಿ ರೂಪುಗೊಳ್ಳುತ್ತಿದೆ.
50ನೇ ಸ್ವಾತಂತ್ರ್ಯೋತ್ಸವ ಈ ಶುಭ ದಿನದಂದು ಕರ್ನಾಟಕ ಸರ್ಕಾರ
ಸ್ವಾತಂತ್ರ್ಯ ಹೋರಾಟಗಾರರ ಕನಸುಗಳನ್ನು ನನಸಾಗಿಸುವ ತನ್ನ
ಧ್ಯೇಯಗಳನ್ನು ಪುನರ್ ಉಚ್ಚರಿಸುತ್ತಿದೆ. ಸಬಲ ಹಾಗೂ ಸಮೃದ್ಧಿ
ಕರ್ನಾಟಕ ನಿರ್ಮಾಣದತ್ತ, ಜನಸಾಮಾನ್ಯರ ಆಶೋತ್ತರಗಳನ್ನು ಈಡೇ
ರಿಸಲು ಸರ್ಕಾರ ಕಂಕಣಬದ್ಧ.

ಕೃಷಿ ಕ್ಷೇತ್ರಕ್ಕೆ ಆದ್ಯತೆ :- ಮೊದಲ ಬಾರಿಗೆ ನವೀನ ಕೃಷಿ ನೀತಿ.ತೋ
ಟಗಾರಿಕೆ ಮತ್ತು ಪುಷ್ಪೋದ್ಯಮ ಉತ್ಪಾನೆದಗಳ ರಫ್ತಿಗೆ ಹೆಚ್ಚಿನ ಒತ್ತು.

**ವಸತಿ ಹೀನರಿಗೆ ವರದಾನ :-** ಸರ್ಕಾರವು ವಸತಿ ಸಮಸ್ಯೆಯನ್ನು ಅದರಲ್ಲೂ ಮುಖ್ಯವಾಗಿ ಆರ್ಥಿಕವಾಗಿ ಹಿಂದುಳಿದ ವರ್ಗಗಳಸಮಸ್ಯೆಯನ್ನು ಪರಿಹರಿಸಲು ಬದ್ಧವಾಗಿದೆ.

**ಹಳ್ಳಿಹಳ್ಳಿಗೆ ಕುಡಿಯುವ ನೀರು :-** ಶುದ್ದವಾದ ಕುಡಿಯುವ ನೀರಿನ ಪೂರೈಕೆಗೆ ಸರ್ಕಾರದ ಅತ್ಯುನ್ನತ ಆದ್ಯತೆ ಗ್ರಾಮಾಂತರ ನೀರು ಸರಬರಾಜಿಗಾಗಿ 252.14 ಕೋಟಿ ರೂಪಾಯಿಗಳು.

**ಅರಣ್ಯೀಕರಣ :-** ಕಾಡುಗಳನ್ನು ರಕ್ಷಿಸಲು ವನ ವಿಜ್ಞಾನ ಕೇಂದ್ರಗಳ ಸ್ಥಾಪನೆ.

**ವಿದ್ಯುತ್ ಉತ್ಪಾದನೆಗೆ ಆದ್ಯತೆ :-** ರಾಜ್ಯದ ವಿದ್ಯುತ್ ಬೇಡಿಕೆಯನ್ನು ಪೂರೈಸಲು ಹಲವು ಯೋಜನೆಗಳ ನಿರ್ಮಾಣ ಕಾರ್ಯಾರಂಭ. ಪಶ್ಚಿಮ ಕರಾವಳಿಯಲ್ಲಿ ಬಾರ್ಜ್‌ಮೌಂಟೆಡ್ ಯೋಜನೆಗಳ ಮುಖಾಂತರ 400 ಮೆ.ವಾ. ವಿದ್ಯುತ್.

**ಆರೋಗ್ಯ ಸೇವೆ ಸುಧಾರಣೆ :-** ಬಡ ಜನರಿಗೆ ಅತ್ಯಾಧುನಿಕ ವೈದ್ಯಕೀಯ ಸವಲತ್ತುಗಳನ್ನು ಒದಗಿಸಲು ಸೂಪರ್ ಸ್ಪೆಷ್ಯಾಲಿಟಿ ಆಸ್ಪತ್ರೆಗಳು. ಇದಕ್ಕಾಗಿ 550 ಕೋಟಿ ರೂ. ಮೀಸಲು

**ಶಿಕ್ಷಣ :-** ಬಾಲಕಿಯರ ಶಿಕ್ಷಣಕ್ಕೆ ಪ್ರಥಮ ಆದ್ಯತೆ. ಶಾಲೆಗಳೇ ಇಲ್ಲದ 1264 ಸ್ಥಳಗಳಲ್ಲಿ ಶಾಲಾ ಸೌಕರ್ಯ. 9,350 ಶಿಕ್ಷಕರ ನೇಮಕ.

**ಮಹಿಳಾ ಮತ್ತು ಮಕ್ಕಳ ಕಲ್ಯಾಣ :-** ಸರ್ಕಾರಿ ಉದ್ಯೋಗಗಳಲ್ಲಿ ಕಾಲೇಜುಗಳಲ್ಲಿ ಮತ್ತು ಪಾಲಿಟೆಕ್ನಿಕ್‌ಗಳಲ್ಲಿ ಮಹಿಳೆಯರಿಗೆ ಮೀಸಲು

**ಸಮಾಜ ಕಲ್ಯಾಣ ಕಾರ್ಯಗಳು :-**

- 8.40 ಕೋಟಿ ರೂ. ವೆಚ್ಚದಲ್ಲಿ ಪರಿಶಿಷ್ಟ ಪಂಗಡ ವಿದ್ಯಾರ್ಥಿಗಳಿಗೆ 30 ವಿದ್ಯಾರ್ಥಿನಿಲಯಗಳು.
- ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ರೈತರಿಗಾಗಿ 5000 ಕೊಳವೆ ಬಾವಿಗಳು
- ಹಿಂದುಳಿದ ಜಾತಿಗಳವರಿಗೆ ರೂ. 35.50 ಕೋಟಿ ಮತ್ತು ಅಲ್ಪಸಂಖ್ಯಾತರಿಗೆ ರೂ. 32.77 ಕೋಟಿ ನೆರವು.

ಸ್ವಾತಂತ್ರ್ಯೋತ್ಸವದ ಶುಭಾಶಯಗಳು
ಕರ್ನಾಟಕ-ನಿರಂತರ ಪ್ರಗತಿಗೆ ನಿರ್ಣಾಯಕ ಹೆಜ್ಜೆಗಳು

ಕರ್ನಾಟಕ ವಾರ್ತೆ

# ಹರಿವ ನೀರಿಗೆ ಹಾಲಾಹಲ

–ಕೃಪೆ: ವಿಜ್ಞಾನ ಸಂಗಾತಿ

ಪರಿಸರ ಹಾಗೂ ಜೀವಗಳ ಹೊಂದಾಣಿಕೆಯು ಅನಿವಾರ್ಯವೆಂಬ ಕೂಗು ಇವತ್ತಿನದಲ್ಲ. ಬೌದ್ಧ ಧರ್ಮದಲ್ಲಿ "ಯಶೋ ಪುನಿ" ಎಂದು ಕರೆಯುವುದು ಇದನ್ನೇ. ಆದರೆ ಜೀವಿಗಳಲ್ಲೆಲ್ಲಾ ತಾನೇ ಶ್ರೇಷ್ಠನೆಂಬ ಹಮ್ಮಿನ ಮನುಷ್ಯನು ಇಡೀ ಪರಿಸರ ತನಗಾಗಿ ಇದೆಯೆಂದು ಭ್ರಮಿಸಿದ್ದಾನೆ. ಪ್ರಗತಿಯ ಹೆಸರಿನಲ್ಲಿ ಕಾಡನ್ನು ದೋಚುವ ಗಾಳಿಗೆ ನಂಜುಬೆರೆಸುವ, ನದಿಗಳಿಗೆ ಪಾಷಾಣ ಸೇರಿಸುವ ಮನುಷ್ಯ ತನ್ನ ಈ ಕುಕೃತ್ಯಕ್ಕೆ ಭಾರೀ ಬೆಲೆ ತರಬೇಕಾಗುವುದರ ಬಗ್ಗೆ ತಿಳಿದೋ, ತಿಳಿಯದೆಯೋ ತೀವ್ರ ಆಸಡ್ಡೆ ಬೆಳಸಿಕೊಂಡಿದ್ದಾನೆ.

ನಾಗರಿಕತೆಗಳನ್ನು ಅರಳಿಸಿದ ನಮ್ಮ ನದಿಗಳ ಪಾಡು ಇಂದು ಏನಾಗಿದೆ ? ಅವು ಮಲಿನಗೊಳ್ಳುತ್ತಿರುವ ರೀತಿ, ವೇಗವನ್ನು ಗಮನಿಸಿದರೆ "ವಾಟರ್ ವಾಟರ್ ಎವೆರಿವೇರ್, ಬಟ್ ನಾಟ್ ಈವನ್ ಎಡ್ರಾಪ್ ಟು ಡ್ರಿಂಕ್" ಎಂದು ನಾವೆಲ್ಲಾ ಹಪಹಪಿಸುವ ದಿನಗಳು ದೂರವಿಲ್ಲವೆನಿಸುತ್ತದೆ.

ಇಂದು ಯಾವುದೇ ನದಿ ಮಾಲಿನ್ಯದಿಂದ ಹೊರತಾಗಿಲ್ಲ. ಎಲ್ಲರ ಪಾಪವನ್ನು ತೊಳೆಯುತ್ತಾಳೆನ್ನುವ ಗಂಗೆ ಮಾಡಿರುವ ಪಾಪವಾದರೂ "ಏನು"? ಧಾರ್ಮಿಕನಿಂದ ಹಿಡಿದು ಕೃಷಿಕನವರೆಗೆ ಎಲ್ಲರೂ ಮಿತಿಮೀರಿದ ವಿಷವನ್ನು ಇವಳಿಗೆ ಉಣಿಸುವವರೇ. ಸುಟ್ಟ, ಅರೆಸುಟ್ಟ ಹೆಣಗಳು, ಮಲ, ಕಸ, ಮುಸುರೆ, ಕೃಷಿಗೆ ಸಿಂಪಡಿಸುವ ಎಂಡ್ರಿನ್, ಡಿ.ಡಿ.ಟಿ, ಕಾಪರ್ ಸಲ್ಫೇಟ್, ನೈಟ್ರೇಟ್, ಫಾಸ್ಫೇಟ್; ಉದ್ಯಮಿಗಳು ಧಾರಾಳವಾಗಿ ಸುರಿಯುವ ಮೀಥೈಲ್ ಮರ್ಕ್ಯುರಿ, ಸಯನೈಡ್ ಮೊದಲಾದ ಮಾರಕ ವಿಷಗಳು .... ........ಒಂದೇ ಎರಡೇ, ಸಾಯುವವನಿಗೆ ಗಂಗೆ ಕುಡಿಸುವ ಮಾತು ಹಾಗಿರಲಿ, ಗಂಗೆ ಕುಡಿದರೇ ಸಾಯುವ ಸ್ಥಿತಿಯಿಂದ ನಾವು ದೂರದಲ್ಲಿಲ್ಲ. ಯಮುನೆಯ ಪಾಡು ಇದಕ್ಕಿಂತ ಭಿನ್ನವೇನಿಲ್ಲ. 1956ರಲ್ಲಿ ದೆಹಲಿಯ ಮುನಿಸಿಪಾಲಿಟಿಯ ಚರಂಡಿಯ ನೀರು ಯಮುನೆಯನ್ನು ಸೇರಿದ ಪರಿಣಾಮವಾಗಿ ಮೂವತ್ತು ಸಾವಿರ ಜನರು ಹಿಪಾಟೈಟಿಸ್ ಬೇನೆಗೆ ತುತ್ತಾದರು, ನೂರಾರು ಜನ ಈ ಲೋಕವನ್ನೇ ತ್ಯಜಿಸಿದರು. ನಮ್ಮ ತುಂಗಭದ್ರೆ ಕೆಲವೊಂದು ಪ್ರದೇಶದಲ್ಲಿ ಮೋರಿಯ ನೀರಿಗಿಂತ ಭಿನ್ನವಾಗಿಲ್ಲ. ಕಾವೇರಿ, ಕಪಿನಿಯರು ಉದ್ಯಮದ ವಿಷವನ್ನು ಕುಡಿಯುತ್ತಲೇ ಇದ್ದಾರೆ. ಇದರಲ್ಲಿ ವಾಸಿಸುವ ಕೆಲವೊಂದು ಜಲಚರಗಳನ್ನು ಮುಂದೆ ಚಿತ್ರಗಳಲ್ಲಿ ಮಾತ್ರ ಕಾಣುವ ದೌರ್ಭಾಗ್ಯ ನಮ್ಮದಾಗಬಹುದು. ಬೆಂಗಳೂರಿಗೆ ಹಿಂದೊಮ್ಮೆ

ನೀರುಣಿಸುತ್ತಿದ್ದ ವೃಷಭಾವತಿ ಹಾಗೂ ಒರಿಸ್ಸಾದ ಋಷಕೂಲ್ಯ ನದಿ ಮರ್ಕ್ಯುರಿ ನದಿಯೇ ಆಗಿಬಿಟ್ಟಿವೆ. ಮುಂಬೈ ನಗರದ ಮಾಹಿಮಗೆ ಪ್ರತಿನಿತ್ಯ ಲಕ್ಷಾಂತರ ಲೀಟರ್ ಬಚ್ಚಲುಕೊಚ್ಚೆ ಉದ್ದಿಮೆ ಕೊಚ್ಚೆ ಪ್ರವಹಿಸುತ್ತದೆ. ತಮಿಳುನಾಡಿನ ಪೆರಿಯರ ನದಿ, ಹೈದರಾಬಾದಿನ ಮೂಸಿ ನದಿ ಇವುಗಳನ್ನು ನದಿಗಳೆಂದು ಕರೆಯಲು ಹಿಂದೆ ಮುಂದೆ ನೋಡುವಷ್ಟು ಹೊಲಸಾಗಿವೆ. ಗೋವಾದ ಕೋಲ್ವಾ ಬೀಚಿನಲ್ಲಿ ಪ್ರತಿನಿತ್ಯ ಮೀನುಗಳು ಸಾಯುತ್ತಿವೆ. ಕೊಲ್ಲಿಯುದ್ಧದ ನಂತರ ಜಲಚರಗಳು ಹೇಗೆ ತತ್ತರಿಸಿದವು ಎಂಬುದಕ್ಕೆ ಸಾಕ್ಷಿ ಬೇಕಿಲ್ಲ.

ಹೊರದೇಶದವರೂ ನದಿಯ ನೀರಿಗೆ ವಿಷ ಬೆರೆಸುವಲ್ಲಿ ಹಿಂದೆ ಬಿದ್ದಿಲ್ಲ. ಜಪಾನ್‌ನಲ್ಲಿ ಮಿನಿಮಾಟ ಸರೋವರಕ್ಕೆ ಸೇರಿದ ಮೀಥೈಲ್ ಮರ್ಕ್ಯುರಿಯಿಂದಾಗಿ ಇಟಾಯ ಇಟಾಯ ಡಿಸೀಜ್ ಎಂಬ ಹೊಸ ಮೂಳೆಯ ರೋಗ ತಲೆದೋರಿತು. ಇಟಲಿಯ ಸೆವಿಸೋ ನಗರದಲ್ಲಿ ಗೊಬ್ಬರದ ಕಾರ್ಖಾನೆಯಿಂದ ಹರಿದ ಡಯಾಕ್ಸಿನ ನಿಂದಾಗಿ ಇದೇ ನಗರ ಸ್ಮಶಾನವಾಯಿತು. ಜಲ-ಜೀವಿಗಳು ನಿರ್ನಾಮವಾದವು. ರೈನ್ ನದಿಯಂತೂ ಯುರೋಪಿನ ಗಟಾರವೆಂದೇ ಅಪಖ್ಯಾತಿ ಪಡೆಯುವಷ್ಟು ಹೊಲಸಾಗಿದೆ. ನದಿಗೆ ಕಲ್ಮಶ ಹರಿಯಬಿಡುವುದೂ ನಮ್ಮ ಕುಡಿಯುವ ನೀರಿನ ಲೋಟದಲ್ಲಿ ಕಲ್ಮಶ ಹಾಕಿಕೊಳ್ಳುವುದೂ ಎರಡೂ ಒಂದೇ ಎಂಬ ಭಾವನೆ ನಮಗೆ ಬರಬೇಕು. ನಾವು ಶೇಕಡಾ 2:3 ರಷ್ಟು ನೀರಿನ ಮಧ್ಯೆ ಇದ್ದೀವೆ. ನಮಗೆಂದೂ ನೀರಿನ ಅಭಾವ ತಲೆದೋರದು ಎಂಬ ಹಂಬಲ ನಿಶ್ಚಿಂತೆಯನ್ನು ಬಿಡಬೇಕು. ಉಪ್ಪು ನೀರು, ಉಪಯೋಗಕ್ಕೆ ದೊರಕದ ನೀರು. ಇವನ್ನೆಲ್ಲಾ ಬಿಟ್ಟರೆ ನಮಗೆ ಬಳಸಲು ಸಿಗುವ ನೀರು ಶೇಕಡಾ 0.35 ಮಾತ್ರ. ಒಂದು ಕಡೆ ನೀರನ್ನು ರಾಡಿಯೆಬ್ಬಿಸುತ್ತಾ ಹೊರಟಿರುವ ನಾವು ನಮ್ಮ ಕೃತ್ಯದ ಭೀಕರ ಪರಿಣಾಮದ ಬಗ್ಗೆ ಇನ್ನಾದರೂ ಯೋಚಿಸಬೇಕು. ಜನಸಾಮಾನ್ಯರು ಸರ್ಕಾರವನ್ನೂ, ಸರ್ಕಾರ ಉದ್ದಿಮೆಗಳನ್ನೂ ಬಿಟ್ಟು ಮಾಡುವುದನ್ನು ಬಿಟ್ಟು ನದಿಯ ರಕ್ಷಣೆ ಒಂದು ಸಾಮೂಹಿಕ ಜವಾಬ್ದಾರಿ ಎಂಬ ಅರಿವು ಮೂಡಬೇಕು.

ಹರಿದು ಹೋದ ವರ್ಷಗಳಲ್ಲಿ ನೀರಿಗೆ ಸೇರಿದ ಹಾಲಾಹಲ ಮುಂದೆ ಹರಿದು ಬರುವ ವರ್ಷಗಳಲ್ಲಿ ಸೇರದಿರಲಿ.

ಸೌಜನ್ಯ : ಚಿತ್ರ ಮಾಹಿತಿ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ ಹಂಪಿ ವಿದ್ಯಾರಣ್ಯ ಕಮಲಾಪುರ.





# ಕ್ಷೇತ್ರ ವಾರ್ತೆ

ಹೆಚ್. ಬಿ. ಗಂಗಾಧರಯ್ಯ

## ಶಿಕ್ಷಕರ ದಿನಾಚರಣೆ

ಶ್ರೀ ಸಿದ್ಧಗಂಗಾ ಸಂಸ್ಥೆ ಶ್ರೀ ಮಠದ ಸಂಯುಕ್ತ ವಿದ್ಯಾರ್ಥಿ ಸಂಘದ ಆಶ್ರಯದಲ್ಲಿ ಸೆಪ್ಟಂಬರ್ 26, 1996 ಆಚರಿಸಲಾಯಿತು. ಮಹಾನ್ ತತ್ವಜ್ಞಾನಿ, ಶ್ರೇಷ್ಠ ಶಿಕ್ಷಣ ತಜ್ಞ ಡಾ. ರಾಧಾಕೃಷ್ಣ ಅವರ ಜನ್ಮದಿನೋತ್ಸವ ಸ್ಮರಣೆಗಾಗಿ ಆಚರಿಸುವ ಈ ಮಹತ್ವ ಪೂರ್ಣ ಸಮಾರಂಭದ ದಿವ್ಯ ಸಾನಿಧ್ಯವನ್ನು ತ್ರಿವಿಧ ದಾಸೋಹಮೂರ್ತಿಗಳಾದ ಪರಮ ಪೂಜ್ಯ ಶ್ರೀ ಶ್ರೀಗಳವರು ವಹಿಸಿ ಶಿಕ್ಷಕರಿಗೆ ಆಶೀರ್ವದಿಸಿ ಸಂದೇಶ ನೀಡಿದರು. ಸಮಾಜ ಮತ್ತು ರಾಷ್ಟ್ರದಲ್ಲಿ ಶಿಕ್ಷಕರ ಸ್ಥಾನ ಉನ್ನತವಾದುದು. ಪ್ರಸ್ತುತ ಕಲುಷಿತ ರಾಜಕಾರಣ ಮತ್ತು ಎಲ್ಲಾ ಕ್ಷೇತ್ರಗಳಲ್ಲಿ ನೈತಿಕ ಮೌಲ್ಯಗಳ ಪುನರುತ್ಥಾನಕ್ಕೆ ಶಕ್ತಿ ನೀಡುವ ಸಾಮರ್ಥ್ಯ ಶಿಕ್ಷಕರಿಗಿದೆ. ಇದಕ್ಕಾಗಿ ಜವಾಬ್ದಾರಿಯರಿತು ಕಾರ್ಯನಿರ್ವಹಿಸಬೇಕು. ಶಾಲೆಗಳು ಮತ್ತು ಶಿಕ್ಷಕರು ಯೋಗ್ಯ ಉತ್ತಮ ಜನಾಂಗ ನಿರ್ಮಾಣ ಮಾಡುವ ಕಾರ್ಖಾನೆಯಾಗಬೇಕು. ಅಪಾಯದ ಅಂಚಿನಲ್ಲಿರುವ ಜಗತ್ತನ್ನು ಪಾರುಮಾಡಬೇಕು. ಮಕ್ಕಳೊಡನೆ ಕಳೆಯುವಕಾಲ ರಸನಿಮಿಷಗಳು. ದಿನಂಪ್ರತಿ ನಗುಮುಖದ ಮಕ್ಕಳನ್ನು ನೋಡಿದರೆ ಎಲ್ಲಾ ಕಷ್ಟವ್ಯಸನಗಳು ಪರಿಹಾರವಾಗಿ ಸ್ಫೂರ್ತಿಉಂಟಾಗುವುದು.

ದೇಶದ ಭವ್ಯತೆ ಸಂಸ್ಕಾರವಾದ ಜನಾಂಗ. ಶಿಕ್ಷಕರು ಆದರ್ಶ ಜೀವನವನ್ನು ನಡೆಸಬೇಕು. ನಮ್ಮ ಭಾರತಕ್ಕೆ ಇಂದು ಮಂಕುಕವಿದಿದೆ. ಪವಿತ್ರವಾದ ಭಾರತೀಯತ್ವವನ್ನು ಬೆಳೆಸಬೇಕು. ಶಿಕ್ಷಕರು ಯಾವಾಗಲೂ ಒಳ್ಳೆಯದನ್ನೇ ಚಿಂತನೆ ಮಾಡುವುದರೊಂದಿಗೆ ಅಧ್ಯಯನ ಶೀಲರಾಗಿ ಜ್ಞಾನ ಶಕ್ತಿಯನ್ನು ಹೆಚ್ಚಿಸಿಕೊಳ್ಳಲೂ ಸದಾ ಶ್ರಮಿಸಬೇಕು ಎಂದು ಒತ್ತಿ ಹೇಳಿದರು.

ಸಮಾರಂಭದ ಅಧ್ಯಕ್ಷತೆ ವಹಿಸಿ ಕ. ಸರ್ಕಾರ ಶಿಕ್ಷಣ ಇಲಾಖೆ ಪ್ರಧಾನ ಕಾರ್ಯದರ್ಶಿ ಶ್ರೀ ಜೆ ಪಿ. ಶರ್ಮಾ ಅವರು ಮಾತನಾಡಿ ರಾಷ್ಟ್ರದ ಅಭಿವೃದ್ಧಿಗೆ ಶಿಕ್ಷಕರ ಸ್ಥಾನ ಪ್ರಧಾನ. ಇದರ ಅರಿವನ್ನು ಶಿಕ್ಷಕರು ಆತ್ಮಾವಲೋಕನ (Introspection) ಮಾಡಿಕೊಳ್ಳಬೇಕು. ನಮ್ಮ ದೇಶ 16 ನೇ ಶತಮಾನದವರೆಗೆ ಸಂವೃದ್ಧವಾಗಿತ್ತು. 300 ವರ್ಷಗಳಕಾಲ ಭಾರತೀಯರು ಗುಲಾಮರಾಗಿದ್ದರು. ಮುಖ್ಯ ಕಾರಣ ಶಿಕ್ಷಣ ಸಾರ್ವತ್ರಿಕವಾಗಿರಲಿಲ್ಲ, ಕೆಲವೇ ವರ್ಗಕ್ಕೆ ಮೀಸಲಾಯಿತು. ಇದರಿಂದಾದ ಕೆಟ್ಟ ಪರಿಣಾಮವನ್ನು ಶಿಕ್ಷಕರು ಇಂದು ಪರ್ಯಾಲೋಚಿಸಬೇಕು. ಯಾವುದೇ ಉತ್ತಮ ಗುಣ ಧರ್ಮಗಳನ್ನು ವ್ಯಕ್ತಿಯಲ್ಲಿ ರೂಪಿಸಲು ಶಿಕ್ಷಣ ಮತ್ತು ಶಿಕ್ಷಕರೇ ಮೂಲ.

ಶಿಕ್ಷಣ ಸಮಾನತೆಯ ಪ್ರತೀಕ. ಇದಕ್ಕೆ ಅಮೇರಿಕಾದೇಶ ಉದಾಹರಣೆ. ಎಲ್ಲಾ ಕ್ಷೇತ್ರಗಳಲ್ಲಿ ಅದ್ಭುತವಾದ ಪ್ರಗತಿಯಾಗಿದೆ. ಅಲ್ಲಿ ಶಿಕ್ಷಕರು ಉದಾತ್ತತತ್ವ ಧೋರಣೆಗಳಿಗೆ ಬದ್ಧರಾಗಿ ಕಾರ್ಯ ನಿರ್ವಹಿಸುತ್ತಾರೆ. ಈ ಬಗ್ಗೆ ಶಿಕ್ಷಕರು ಉದಾತ್ತಗೊಳ್ಳಬೇಕು ಎಂದರು.

ವಿದ್ಯಾರ್ಥಿಗಳನ್ನು ಕುರಿತು ನಿಮ್ಮ ಕನಸನ್ನು ನೆನೆಸಲು ಪೂಜ್ಯ ಶ್ರೀ ಶ್ರೀಗಳು ಬಹಳ ಶ್ರಮಿಸುತ್ತಿದ್ದಾರೆ. ಕಲಿಯುವ ಆಸಕ್ತಿ ಭಾವನೆ ಹೊಂದಿ ಅಧ್ಯಯನಕ್ಕೆ ಕ್ಷಣ ಕ್ಷಣವನ್ನು ಬಳಸಿಕೊಳ್ಳಬೇಕೆಂಬ ಹಂಬಲವಿರಬೇಕು.

ಮುಖ್ಯ ಆತಿಥಿಗಳಾಗಿ ತುಮಕೂರಿನ ಎಸ್.ಐ.ಟಿ. ತಾಂತ್ರಿಕ ನಿರ್ದೇಶಕರಾದ ಪ್ರೊ. ಜಿ. ಪರಮೇಶ್ವರಪ್ಪನವರು ಶ್ರೀ ಮಠದ ವಿದ್ಯಾ ಸಂಸ್ಥೆಗಳಲ್ಲಿ 95 – 96ನೇ ಸಾಲಿನಲ್ಲಿ ನಿವೃತ್ತರಾದ 15 ಮಂದಿ ಶಿಕ್ಷಕರಿಗೆ ಸನ್ಮಾನವಿತರಿಸಿದರು. ಅವರು ಮಾತನಾಡಿ ಶಿಕ್ಷಕರಿಗೆ ಶ್ರದ್ಧೆ ಮೂಲಧನ. ಅಶ್ರದ್ಧೆ ವ್ಯಕ್ತಿಯನ್ನು ನಾಶಮಾಡುತ್ತದೆ. ನ್ಯೂನ್ಯತೆಗಳು ಜಾಸ್ತಿಯಾಗುತ್ತವೆ. ಶಿಕ್ಷಕರ ಪಾತ್ರ ಸಮಾಜದಲ್ಲಿ ಗುರುತರವಾದದ್ದು. "ಗುರು" ಎಂಬ ಪದ ಹೆಚ್ಚಿನದು ಮತ್ತು ವಿಶಾಲ, ವಿಸ್ತಾರವನ್ನು ಸೂಚಿಸುತ್ತದೆ. ಶಿಕ್ಷಕರಲ್ಲಿ ವಿಷಯ ಪ್ರಾವೀಣ್ಯತೆ ಲಭ್ಯವಾಗಲು ಓದುವ ಹವ್ಯಾಸಕ್ಕೆ ಸಮರ್ಪಿಸಿಕೊಳ್ಳಬೇಕೆಂದು ನುಡಿದರು.

ಶ್ರೀ ಶ್ರೀಗಳವರ ವಜ್ರಮಹೋತ್ಸವ ಸಮಿತಿಯ ಕಾರ್ಯದರ್ಶಿಗಳಾದ ಶ್ರೀ ಎಸ್. ಎಸ್. ಹಸಬಿಯವರು ಮಾತನಾಡಿ ಶಿಕ್ಷಕರ ಮತ್ತು ವಿದ್ಯಾರ್ಥಿಗಳ ಸಂಬಂಧ ಮಹಾ ಭಾರತದಲ್ಲಿ ಕಂಡು ಬರುವ "ಏಕಲವ್ಯನ" ಗುರುಭಕ್ತಿಯನ್ನು ಪ್ರತಿಪಾದಿಸಿ ಆಧ್ಯಾತ್ಮಿಕತೆಉಳ್ಳ ಶ್ರೇಷ್ಠ ಶಿಕ್ಷಕರನ್ನು ಸ್ಮರಣೆಗೈಯಬೇಕು ಎಂದರು.

ನಿವೃತ್ತ ಶಿಕ್ಷಕರ ಪರವಾಗಿ ಶ್ರೀ ಕೆ. ಜಿ. ರಂಗಯ್ಯನವರು ಶ್ರೀ ಶ್ರೀಗಳವರ ಸಾನಿಧ್ಯದಲ್ಲಿ ನಮ್ಮ ಪೂರ್ಣಸೇವೆಯನ್ನು ತೊಡಗಿಸಿಕೊಂಡದ್ದು ಪುಣ್ಯದ ಫಲವೆಂದು ಭಕ್ತಿಭಾವದಿಂದ ಸ್ಮರಿಸಿದರು.

ಪ್ರಾರಂಭಕ್ಕೆ ಹೆಚ್. ಬಿ. ಗಂಗಾಧರಯ್ಯ ಅತಿಥಿಗಳನ್ನು ಪರಿಚಯಿಸಿ ಸ್ವಾಗತ ಕೋರಿದರು. ಶ್ರೀ ಆರ್. ವೀರಣ್ಣ ವಂದನೆ ಸಲ್ಲಿಸಿದರು. ಶ್ರೀಮತಿ ನಾಗಸುಲೋಚನ ಕಾರ್ಯಕ್ರಮ ನಿರೂಪಿಸಿದರು.



## ಪ್ರಕಟಣೆ

ಪರಮ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ವಜ್ರ ಮಹೋತ್ಸವವನ್ನು 1997–ಫೆಬ್ರವರಿ ಮಾಹೆಯಲ್ಲಿ ಆಚರಿಸಲು ಯೋಚಿಸಲಾಗಿದೆ. ಶ್ರೀ ಮಠದ ಹಳೆಯ ವಿದ್ಯಾರ್ಥಿಗಳು ಈ ನಿಧಿಗೆ ವಂತಿಕೆಗಳನ್ನು ನೀಡಿರುವುದು ಸರಿಯಷ್ಟೆ. 5000 ರೂಗಳನ್ನು ನೀಡುವವರ ಹೆಸರನ್ನು ಅಮೃತ ಶಿಲೆಯ ಮೇಲೆ ಗುರುತಿಸುವ ಯೋಜನೆ ರೂಪಿಸಿದೆ. ಪ್ರಯುಕ್ತ ಆ ಮೊತ್ತಕ್ಕೆ ಅನುಗುಣವಾಗಿ ಸಂದಾಯ ಮಾಡಿ ಹೆಸರನ್ನು ನೊಂದಾಯಿಸಿಕೊಳ್ಳಲು ಅವಕಾಶ ಕಲ್ಪಿಸಲಾಗಿದೆ. ಈ ಬಗ್ಗೆ ಎಲ್ಲ ಹಳೆಯ ವಿದ್ಯಾರ್ಥಿಗಳು ಗಮನ ನೀಡಲು ಕೋರುತ್ತೇವೆ.

ಪ್ರಧಾನ ಕಾರ್ಯದರ್ಶಿಗಳು
ಹಳೆಯ ವಿದ್ಯಾರ್ಥಿ ಸಂಘ.

## ಶ್ರದ್ಧಾಂಜಲಿ

ಶ್ರೀಮಠದ ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯದಲ್ಲಿ ಕೆಲಸ ಮಾಡುತ್ತಿದ್ದ ತುಮಕೂರು ತಾ|| ಹರಳೂರಿನ ಶ್ರೀ ಮರುಳಸಿದ್ದಪ್ಪ 9-10-96 ಬುಧವಾರ ಶಿವೈಕ್ಯರಾದರು. 15 ವರ್ಷಗಳ ಕಾಲ ಇಲ್ಲಿ ಶ್ರದ್ಧಾಭಕ್ತಿಯಿಂದ ಸೇವೆಯನ್ನು ಸಲ್ಲಿಸಿದರು. ಮುದ್ರಣಾಲಯದ ಸಿಬ್ಬಂದಿವರ್ಗ ಕೃತಜ್ಞತೆಯಿಂದ ಅವರ ನಿಧನಕ್ಕೆ ಸಂತಾಪವನ್ನು ಸೂಚಿಸಿದೆ. ದಿವಂಗತರ ಆತ್ಮಕ್ಕೆ ಶಾಂತಿ ನೀಡಲಿ ಎಂದು "ಸಿದ್ಧಗಂಗಾ" ಪ್ರಾರ್ಥಿಸುತ್ತದೆ.

ಸ್ಥಾಪನೆ : 1943 | ತಂತಿ : 'ವೀರಶೈವ'

ಕೆ.ಎಸ್.ಟಿ. 73606285 } ದಿ 24-8-62
ಸಿ.ಎಸ್.ಟಿ. 73656288 }

ಕೇಂದ್ರ ಕಛೇರಿ : { 72866
70204

ಮಿನಿ ಬಜಾರ್ : 351114

## ವೀರಶೈವ ಸಹಕಾರ ಸಂಘ ನಿಯಮಿತ

(ಬೆಂಗಳೂರು ನಗರ ಜಿಲ್ಲಾ ಕೇಂದ್ರ ಸಹಕಾರ ಸಗಟು ಮಾರಾಟ ಮಳಿಗೆ)

ಅಪರ್ಣ ಕಾಂಪ್ಲೆಕ್ಸ್, 1 ನೇ ಮಹಡಿ, ಎಸ್. ಸಿ. ರಸ್ತೆ, ಬೆಂಗಳೂರು-560009.

ವ್ಯವಹಾರ : ಸ್ವಚ್ಛ, ಗುಣಮಟ್ಟದ ದಿನನಿತ್ಯದ ಬಳಕೆ ಪದಾರ್ಥಗಳನ್ನು ಕಡಿಮೆ ದರದಲ್ಲಿ ಸಗಟು ಮಾರಾಟ ಶಾಖೆ ಮತ್ತು ಚಿಲ್ಲರೆ ಮಾರಾಟ ಶಾಖೆ ಮೂಲಕ ವಿತರಣೆ.

ಗ್ರಾಹಕರ ಮನೆಗಳಿಗೆ ಸರಬರಾಜು ವ್ಯವಸ್ಥೆ ಮಾಡಲಾಗುವುದು.

1994-95 ನೇ ಸಾಲಿನಲ್ಲಿ ಷೇರು ಬಂಡವಾಳ :

| | | | |
|---|---|---|---|
| ಸದಸ್ಯರಿಂದ | ರೂ. | 9.00 | ಲಕ್ಷ |
| ಸರ್ಕಾರದಿಂದ | ರೂ. | 14-32 | ಲಕ್ಷ |
| ಒಟ್ಟು | ರೂ. | 23.32 | ಲಕ್ಷ |

| | | | | | |
|---|---|---|---|---|---|
| 1) | ಸದಸ್ಯರ ಸಂಖ್ಯೆ | : | 5451 | | |
| 2) | ಸಗಟು ಮತ್ತು ಚಿಲ್ಲರೆ ಮಾರಾಟ | : | ರೂ. | 2,115.30 | ಲಕ್ಷ |
| 3) | ಆಪದ್ಧನ | : | ರೂ. | 12.98 | ಲಕ್ಷ |
| 4) | ಇತರೆ ನಿಧಿಗಳು | : | ರೂ. | 194.12 | ಲಕ್ಷ |
| 5) | 1994-95 ರಲ್ಲಿ ನಿವ್ವಳ ಲಾಭ | : | ರೂ. | 2.01 | ಲಕ್ಷ |

6) ಸದಸ್ಯರಿಗೆ ಸೌಲಭ್ಯಗಳು :

ಅ) ಕೊಳ್ಳುವ ಪದಾರ್ಥದ ಮೇಲೆ ಶೇ. 2 ರಿಯಾಯಿತಿ
ಆ) ಷೇರಿನ ಮೇಲೆ ಶೇ. 9 ಷೇರು ಲಾಭಾಂಶ

ಮಾನ್ಯ ಸದಸ್ಯರು ಮತ್ತು ಗ್ರಾಹಕರ ಅನುಕೂಲಕ್ಕಾಗಿ ಬೆಂಗಳೂರು ನಗರದಲ್ಲಿ 4 ಸಗಟು ಮಾರಾಟ ಮಳಿಗೆಗಳು, 38 ಚಿಲ್ಲರೆ ಮಳಿಗೆಗಳು ಮತ್ತು ವಿಜಯನಗರದ ಬಡಾವಣೆಯಲ್ಲಿ ಮತ್ತು ಸೋಮೇಶ್ವರಪುರದಲ್ಲಿ ಒಂದು ಡಿಪಾರ್ಟ್‌ಮೆಂಟಲ್ ಸ್ಟೋರ್ಸ್‌ಗಳಿವೆ.

ಕಾರ್ಯಕಾರಿ ಮಂಡಳಿಯ ಸದಸ್ಯರುಗಳು :

1) ಶ್ರೀ ಬಿ.ಟಿ. ಉಮೇಶ್
ಅಧ್ಯಕ್ಷರು
2) ಶ್ರೀ ಆರ್. ನೀಲಕಂಠಯ್ಯ
ಉಪಾಧ್ಯಕ್ಷರು

-: ನಿರ್ದೇಶಕರು :-

3) ಶ್ರೀ ಬಿ. ಎಸ್. ಪರಮಶಿವಯ್ಯ
4) ಶ್ರೀ ಎಲ್.ಎಸ್. ಕುಮಾರಸ್ವಾಮಿ
5) ಶ್ರೀ ಗುರುನಂಜಯ್ಯ
6) ಶ್ರೀ ಜಿ. ಶಿವಕುಮಾರ್
7) ಶ್ರೀ ಎಲ್. ರಾಜಪ್ಪ
8) ಶ್ರೀ ಹೆಚ್.ಎಸ್. ಶಿವಲಿಂಗಯ್ಯ
9) ಶ್ರೀ ಬಿ.ಎಂ ಶ್ರೀಕಂಠಸ್ವಾಮಿ
10) ಶ್ರೀ ಸಿ. ಕೆ. ಬಸವರಾಜು
11) ಶ್ರೀ ಬಿ. ಜಿ. ನಾಗಬಸಪ್ಪ
12) ಶ್ರೀಮತಿ ಎನ್. ಗಿರಿಜ
13) ಶ್ರೀ ಬಿ.ಎಸ್. ಕೆಂಪರಾಜು ಸ.ನಾ.ನಿ.
14) ಶ್ರೀಮತಿ ಮಮತಾವಿಶ್ವನಾಥ್ ಸ.ನಾ.ನಿ.
15) ಶ್ರೀ ಎಲ್. ಗೋವಿಂದರಾಜು ಸ.ನಾ.ನಿ.
16) ಶ್ರೀಮತಿ N.S. ಸೌಭಾಗ್ಯಮ್ಮ ಬಿ.ಡಿ.ಸಿ.ಸಿ.ನಿ.
17) ಶ್ರೀ ಎ. ಪ್ರಸನ್ನಕುಮಾರಸ್ವಾಮಿ
ಪ್ರಧಾನ ವ್ಯವಸ್ಥಾಪಕರು.

" SIDDAGANGA MONTHLY Reg. No. KRNQ - 9

## ಶ್ರೀ ಸಿದ್ಧಗಂಗಾ ಬಸವತತ್ವ ಪ್ರಯೋಗ ಶಾಲೆ
## ಶ್ರೀ ಶ್ರೀಗಳವರ ವಜ್ರ ಮಹೋತ್ಸವ ಸ್ಮಾರಕ ಸೌಧಗಳು



ನೂತನ ಮಹಾದಾಸೋಹ ಪ್ರಸಾದ ನಿಲಯ



ನೂತನ ಬೃಹತ್ ವಸತಿ ಮಂದಿರ

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ - 572 104.